# ಈಶಾವಾಸ್ಯೋಪನಿಷತ್

ಮೂಲ ಪ್ರತಿಪದಾರ್ಥ
ತಾತ್ಪರ್ಯ ಟಿಪ್ಪಣಿಗಳೊಡನೆ

ಈಶಾ ವಾಸ್ಯಮಿದಂ ಸರ್ವಂ



ಶ್ರೀರಾಮಕೃಷ್ಣಾಶ್ರಮ
ಮೈಸೂರು ೨

# ಈಶಾವಾಸ್ಯೋಪನಿಷತ್

ಮೂಲ ಪ್ರತಿಪದಾರ್ಥ
ತಾತ್ಪರ್ಯ ಟಿಪ್ಪಣಿಗಳೊಡನೆ

ಸ್ವಾಮಿ ಆದಿದೇವಾನಂದ



ಶ್ರೀರಾಮಕೃಷ್ಣಾಶ್ರಮ
ಮೈಸೂರು ೨

# ಪ್ರಸ್ತಾವನೆ

ಕ್ರಿ. ಪೂ. ೬ನೆಯ ಶತಮಾನವು ನಮ್ಮನ್ನು ಬೆರಗುಗೊಳಿಸುವ ಯುಗ. ಆಗ ಮಾನವನ ಭಾವಪ್ರಪಂಚದಲ್ಲಿ ಒಂದು ಅದ್ಭುತಕ್ರಾಂತಿಯುಂಟಾಗಿತ್ತು. ಆ ಸಮಯದಲ್ಲಿ ಗ್ರೀಸ್‌ದೇಶದ ಪೈತಾಗೊರಸ್, ಚೀನಾದೇಶದ ಕನ್‌ಫ್ಯೂಷಿಯಸ್, ಗೌತಮಬುದ್ಧ, ಪರ್ಷಿಯದ ಝೊರೊ ಆಸ್ಟರ್ ಮೊದಲಾದವರು ತಮ್ಮ ತತ್ತ್ವಗಳನ್ನು ಪ್ರಚಾರಮಾಡುತ್ತಿದ್ದರು. ಇದಕ್ಕೆ ಮೊದಲು ನಮ್ಮ ದೇಶದಲ್ಲಿ ಸೂಕ್ಷ್ಮವೂ ಪ್ರಬಲವೂ ಆದ ಒಂದು ತತ್ತ್ವಪ್ರವೃತ್ತಿಯು ಪ್ರಸರಿಸಲು ಪ್ರಾರಂಭಿಸಿತ್ತು. ಇದು ಇಡಿಯ ಭಾರತವರ್ಷದ ಮಾನಸಿಕಕಲ್ಪನೆಗಳನ್ನೆಲ್ಲಾ ಪ್ರಚೋದಿಸಿ ತನ್ನ ಪ್ರಭಾವವನ್ನು ದೇಶಾಂತರಗಳಲ್ಲೂ ಬೀರಿತು. ವೇದವಿರೋಧಿಗಳಾದ ಚಾರ್ವಾಕರೂ, ವೈದಿಕರಾದ ಕರ್ಮಮೀಮಾಂಸಕರೂ, ಬೌದ್ಧರೂ, ಸಾಂಖ್ಯರೂ, ವೇದಾಂತಿಗಳೂ ತಮ್ಮ ಮತಗಳನ್ನು ಪ್ರತಿಪಾದಿಸಲು ಉಪನಿಷತ್ತುಗಳಲ್ಲಿ ಪ್ರಮಾಣಗಳನ್ನು ಕಂಡುಹಿಡಿದಿರುತ್ತಾರೆ. ನಮ್ಮ ಪ್ರಾಚೀನ ಋಷಿಗಳಿಗೆ ಒಂದು ಅಲೌಕಿಕದೃಷ್ಟಿ ಇತ್ತು. ಪ್ರಕೃತಿಯ ಮೋಹಜಾಲದಲ್ಲಿ ಇವರು ಸಿಕ್ಕಿಬೀಳಲಿಲ್ಲ. ಜೀವನವೆಂದರೇನು? ದೃಷ್ಟಜೀವನಕ್ಕೂ ಅದೃಷ್ಟ ಗತಿಗಳಿಗೂ ಏನು ಸಂಬಂಧ?—ಇವೇ ಮೊದಲಾದ ಪ್ರಶ್ನೆಗಳನ್ನು ಹಾಕತೊಡಗಿದರು. 'ಜಗತ್ತಿನ ಕಾರಣವು ಯಾವುದು? ಬ್ರಹ್ಮವೇ? ನಾವು ಎಲ್ಲಿಂದ ಹುಟ್ಟುತ್ತೇವೆ? ನಾವು ಏಕೆ ಜೀವಿಸುತ್ತೇವೆ? ನಮ್ಮ ಕೊನೆಯ ಅವಸ್ಥೆ ಏನು?'[೧] ಎಂದು ಶ್ವೇತಾಶ್ವತರೋಪನಿಷತ್ತಿನ ಮೊದಲನೆಯ ಮಂತ್ರವು ಕೇಳುತ್ತದೆ

ಭಾರತವರ್ಷದ ಸಂಸ್ಕೃತಿಗೆ ವೇದವೇ ಮುಖ್ಯವಾದ ಆಧಾರ. ಅದರ ಉತ್ತರಭಾಗವಾದ ಉಪನಿಷತ್ತುಗಳೇ ಸರ್ವದರ್ಶನಗಳಿಗೂ ಮೂಲ. ನೈರಾತ್ಮ್ಯ

[೧] ಕಿಂ ಕಾರಣಂ ಬ್ರಹ್ಮ ಕುತಃ ಸ್ಮ ಜಾತಾ
ಜೀವಾಮ ಕೇನ ಕ್ವ ಚ ಸಂಪ್ರತಿಷ್ಠಾಃ ।
ಅಧಿಷ್ಠಿತಾಃ ಕೇನ ಸುಖೇತರೇಷು
ವರ್ತಾಮಹೇ ಬ್ರಹ್ಮವಿದೋ ವ್ಯವಸ್ಥಾಮ್ ॥

ವಾದದ ನಿರಾಕರಣೆಯನ್ನೂ, ಬಾಹ್ಯಪೂಜೆಯ ರಸಹೀನತೆಯನ್ನೂ, ಕರ್ಮಕಾಂಡದ ನಿರರ್ಥಕತೆಯನ್ನೂ ಇಲ್ಲಿ ನೋಡಬಹುದು. ಸಮಸ್ತದೇವದೇವಿಯರೂ ಅದ್ವಿತೀಯಪರಮಾರ್ಥಶಕ್ತಿಯ ಅಂಶಗಳೆಂದೂ. ಅಚಿದ್ವಸ್ತುಗಳಿಗಿಂತ ಚಿದ್ವಸ್ತುವೇ ಮುಖ್ಯವೆಂದೂ. ಈ ಚಿದ್ವಸ್ತುವಿನ ಮೂಲಕ ಜೀವ, ಜಗತ್ತು, ಈಶ್ವರ ಎಂಬ ತತ್ತ್ವತ್ರಯದ ಸ್ವರೂಪ ಮತ್ತು ಸಂಬಂಧ ಇವು ತಿಳಿಯುತ್ತವೆಂದೂ. ಈಶ್ವರನೇ ಚಿದಚಿದ್ವಸ್ತುಗಳಲ್ಲಿ ಅಂತರ್ಯಾಮಿಯಾಗಿರುವನೆಂದೂ ಇಲ್ಲಿ ತಿಳಿಯಬಹುದು; ಕ್ಷುದ್ರವಾದ ವಿಷಯಸುಖವು ನಮ್ಮನ್ನು ಹೇಗೆ ಶೃಂಖಲೆಗಳಿಂದ ಬಂಧಿಸುವುದೆಂದೂ. ಇಂದ್ರಿಯನಿಗ್ರಹವು ಹೇಗೆ ಮುಕ್ತಿಪ್ರದವೆಂದೂ ಉಪನಿಷತ್ತುಗಳು ಸಾರುತ್ತವೆ ಉಪನಿಷತ್ತುಗಳ ಪ್ರಭಾವ ಪಾಶ್ಚಿಮಾತ್ಯ ವಿದ್ವಾಂಸರಲ್ಲಿ ಕೂಡ ಒಂದು ವಿಶಿಷ್ಟ ಪರಿಣಾಮವನ್ನು ತಂದಿರುತ್ತದೆ ಶೋಪೆನ್-ಹವರ್ ಎಂಬ ಜರ್ಮನಿಯ ತಜ್ಞನ ಮತದಲ್ಲಿ ಉಪನಿಷತ್ತುಗಳ ಭಾವಗಳು ಸ್ಪಷ್ಟವಾಗಿ ಕಂಡುಬರುತ್ತವೆ. "ಈ ಪ್ರಪಂಚದಲ್ಲಿ ಉಪನಿಷತ್ತುಗಳಿಗಿಂತ ಪ್ರತಿ-ಫಲವನ್ನು ಕೊಡುವ, ಉದ್ಧರಿಸುವ ಯಾವ ಗ್ರಂಥವೂ ಇಲ್ಲ. ನಾನು ಬದುಕಿರುವಾಗ ಇದರಿಂದ ಮನಃಸಮಾಧಾನವನ್ನು ಪಡೆದೆನು. ಮರಣಾನಂತರವೂ ಇದರಿಂದಲೇ ಶಾಂತಿಯನ್ನು ಪಡೆಯುತ್ತೇನೆ" ಎಂದು ಅವನು ಹೇಳಿದ್ದಾನೆ. ಪರ್ಮೆನೈಡೀಸ್, ಪ್ಲೇಟೋ, ಕಾಂಟ್ ಮೊದಲಾದ ದಾರ್ಶನಿಕರ ತತ್ತ್ವಗಳು ಉಪನಿಷತ್ತುಗಳಲ್ಲಿ ಸಂಗ್ರಹರೂಪದಿಂದ ಅಡಗಿವೆಯೆಂದು ಡಾಯ್ಸನ್ ಮಹಾಶಯನು ಹೇಳಿರುತ್ತಾನೆ. ಇವನು ಈ ದೇಶಕ್ಕೆ ಬಂದಾಗ ಬೊಂಬಾಯಿಯ ರಾಯಲ್ ಏಶಿಯಾಟಿಕ್ ಸೊಸೈಟಿಯಲ್ಲಿ ಮಾತನಾಡುತ್ತ ಈ ಉಪದೇಶವನ್ನು ಕೊಟ್ಟನು—"ಸಾಂಪ್ರದಾಯಿಕವಾದ ವೇದಾಂತವು ನೈತಿಕಜೀವನದ ಪ್ರಬಲವಾದ ಆಧಾರ. ಜೀವನಮರಣಗಳ ನರಳಾಟದಲ್ಲಿ ಇದು ಸಮಾಧಾನವನ್ನು ಕೊಡುವುದು. ಭಾರತೀಯರೇ, ಇದನ್ನು ಬಿಡಬೇಡಿ."

ಪ್ರಸ್ಥಾನತ್ರಯದಲ್ಲಿ ಮೊದಲನೆಯ ಸ್ಥಾನ ಉಪನಿಷತ್ತುಗಳಿಗೆ; ಅನಂತರ ವೇದಾಂತಸೂತ್ರಗಳು ಮತ್ತು ಭಗವದ್ಗೀತೆ. ಉಪನಿಷತ್ ಎಂದರೇನು? ಶ್ರೀಶಂಕರಭಗವತ್ಪಾದರು ತಮ್ಮ ಕಾಠಕೋಪನಿಷದ್ಭಾಷ್ಯದ ಅವತರಣಿಕೆಯಲ್ಲಿ ಹೇಳಿರುವ ಭಾವಾರ್ಥ ಹೀಗಿದೆ:

ವಿಶರಣ, ಗತಿ, ಅವಸಾದನ—ಎಂಬ ಅರ್ಥಗಳುಳ್ಳ "ಸದ್" ಧಾತುವಿನ ಹಿಂದೆ "ಉಪ", "ನಿ" ಎಂಬ ಉಪಸರ್ಗಗಳೂ, ಮುಂದೆ "ಕ್ವಿಪ್" ಎಂಬ ಪ್ರತ್ಯ

ಯವೂ ಒಂದು "ಉಪನಿಷತ್" ಎಂಬ ರೂಪವು ಆಗಿರುತ್ತದೆ. ಉಪನಿಷತ್ ಎಂಬ ಶಬ್ದಕ್ಕೆ ಬ್ರಹ್ಮವಿಷಯವಾದ ವಿದ್ಯೆ ಎಂದರ್ಥ. ವಿರಕ್ತರೂ ಬ್ರಹ್ಮವಿದ್ಯಾನಿಷ್ಠರೂ ಆದ ಮುಮುಕ್ಷುಗಳು ಸಂಸಾರಬೀಜವಾದ ಅವಿದ್ಯಾದಿಗಳನ್ನು ನಾಶಗೊಳಿಸುವುದು (ಸದ್ = ವಿಶರಣ) ಎಂಬ ಅರ್ಥಯೋಗದಿಂದ ಬ್ರಹ್ಮವಿದ್ಯೆಯು ಉಪನಿಷತ್ ಎನಿಸುತ್ತದೆ. ಇದು ಧಾತುವಿನ ಮೊದಲನೆಯ ಅರ್ಥ. ಮುಮುಕ್ಷುಗಳನ್ನು ಬ್ರಹ್ಮದಲ್ಲಿ ಸೇರಿಸುವುದು (ಸದ್ = ಗತಿ) ಎಂಬ ಅರ್ಥಯೋಗದಿಂದ ಈ ವಿದ್ಯೆಯು ಉಪನಿಷತ್ ಎನಿಸುತ್ತದೆ. ಇದು ಧಾತುವಿನ ಎರಡನೆಯ ಅರ್ಥ. ಗರ್ಭವಾಸ ಜನ್ಮ ಮುಪ್ಪು ಮೊದಲಾದ ಉಪದ್ರವಸಮೂಹವನ್ನು ಶಿಥಿಲ ಮಾಡುವುದು (ಸದ್ = ಅವಸಾದನ) ಎಂಬ ಅರ್ಥಯೋಗದಿಂದ ಇದು ಉಪನಿಷತ್ ಎನಿಸುತ್ತದೆ. ಇದು ಧಾತುವಿನ ಮೂರನೆಯ ಅರ್ಥ.

ಮೇಲೆ ಹೇಳಿದ ಅರ್ಥವಲ್ಲದೆ ಉಪನಿಷತ್ತಿನಲ್ಲಿ ಪ್ರತಿಪಾದಿಸಲ್ಪಟ್ಟಿರುವ ರಹಸ್ಯಗಳಿಗೂ, ಇದರಿಂದುಂಟಾಗುವ ಬ್ರಹ್ಮಜ್ಞಾನಕ್ಕೂ, ಉಪಾಸಕರು ಅನುಷ್ಠಿಸಬೇಕಾದ ವ್ರತಾದಿನಿಯಮಗಳಿಗೂ ಉಪನಿಷತ್ ಎಂಬ ಪದವು ಪ್ರಯೋಗಿಸಲ್ಪಟ್ಟಿದೆ. ಯಾವ ಅರ್ಥವನ್ನು ಹೇಳಿದರೂ ಉಪನಿಷಚ್ಛಬ್ದಕ್ಕೆ ಬ್ರಹ್ಮವಿದ್ಯೆಯೆಂಬುದೇ ತಾತ್ಪರ್ಯ.

ಮುಕ್ತಿಕೋಪನಿಷತ್ತಿನ ಪ್ರಕಾರ ಉಪನಿಷತ್ತುಗಳ ಸಂಖ್ಯೆ ೧೦೮. ದಾರಾಷುಕೋ ಮಾಡಿಸಿದ ಪರ್ಷಿಯನ್ ಭಾಷಾಂತರದಲ್ಲಿ ಐವತ್ತು ಉಪನಿಷತ್ತುಗಳಿವೆ. ಮ್ಯಾಕ್ಸ್ ಮುಲ್ಲರ್ ಮಾಡಿದ ಒಂದು ಅಕಾರಾದಿಪಟ್ಟಿಯ ಪ್ರಕಾರ ಉಪನಿಷತ್ತುಗಳ ಸಂಖ್ಯೆ ೧೪೯. ಡಾಕ್ಟರ್ ಬರ್ನೆಲ್ ಮಹಾಶಯನ ಪಟ್ಟಿಯಲ್ಲಿ ೧೫೪ ಉಪನಿಷತ್ತುಗಳೂ, ಪ್ರೊಫೆಸರ್ ಹೌಗ್‍ರ ಪಟ್ಟಿಯಲ್ಲಿ ೧೭೦ ಉಪನಿಷತ್ತುಗಳೂ ಕಂಡುಬರುತ್ತವೆ. ಇವೆಲ್ಲವೂ ಒಂದೇ ಕಾಲಕ್ಕೆ ಸೇರಿದವಲ್ಲ, ಭಿನ್ನಭಿನ್ನ ಕಾಲಕ್ಕೆ ಸೇರಿದುವು. ಸಂಹಿತೆಗಳು ಬ್ರಾಹ್ಮಣಗಳು ಆರಣ್ಯಕಗಳು ಇವುಗಳಲ್ಲಿ ಸೇರಿದ ಮತ್ತು ಭಗವಾನ್ ಬಾದರಾಯಣರ ವೇದಾಂತಸೂತ್ರಗಳಲ್ಲಿ ಚರ್ಚಿಸಲ್ಪಟ್ಟ ಉಪನಿಷತ್ತುಗಳು ಪ್ರಾಚೀನವೆಂದೂ, ತತ್ತ್ವದೃಷ್ಟಿಯಿಂದ ಅತಿ ಮುಖ್ಯವೆಂದೂ ಹೇಳಬಹುದು. ಶ್ರೀಮಚ್ಛಂಕರಾಚಾರ್ಯರು ಈಶ ಕೇನ ಕಠ ಪ್ರಶ್ನ ಮುಂಡಕ ಮಾಂಡೂಕ್ಯ ತೈತ್ತಿರೀಯ ಐತರೇಯ ಛಾಂದೋಗ್ಯ ಬೃಹದಾರಣ್ಯಕ ಎಂಬ ದಶೋಪನಿಷತ್ತುಗಳ ಮೇಲೆ ಭಾಷ್ಯಗಳನ್ನು ಬರೆದಿದ್ದಾರೆ. ಆದರೆ ಮಾಂಡೂಕ್ಯಭಾಷ್ಯವು ಅವರದೇ ಎನ್ನುವ ವಿಚಾರದಲ್ಲಿ ಆಧುನಿಕ ವಿದ್ವಾಂಸರಲ್ಲಿ

ಭಿನ್ನಾಭಿಪ್ರಾಯಗಳುಂಟು. ಶ್ರೀಮದ್ರಾಮಾನುಜಾಚಾರ್ಯರು ದಶೋಪನಿಷತ್ತುಗಳ ಮೇಲೆ ವ್ಯಾಖ್ಯಾನ ಮಾಡದಿದ್ದರೂ ತಮ್ಮ ವೇದಾರ್ಥಸಂಗ್ರಹದಲ್ಲಿ ಇವುಗಳನ್ನು ಕುರಿತು ಚರ್ಚೆಮಾಡಿದ್ದಾರೆ. ಶ್ರೀಮನ್ಮಧ್ವಾಚಾರ್ಯರು ದಶೋಪನಿಷತ್ತುಗಳ ಮೇಲೆ ವ್ಯಾಖ್ಯಾನವನ್ನು ಬರೆದಿದ್ದಾರೆ.

ಈ ಉಪನಿಷತ್ತಿನ ಮೊದಲನೆಯ ಮಂತ್ರವು "ಈಶಾ ವಾಸ್ಯಮ್" ಎಂದು ಪ್ರಾರಂಭವಾಗುವುದರಿಂದ ಇದಕ್ಕೆ "ಈಶಾವಾಸ್ಯೋಪನಿಷತ್" ಅಥವಾ "ಈಶೋಪನಿಷತ್" ಎಂದು ಹೆಸರು. ಇದು ಶುಕ್ಲಯಜುರ್ವೇದದ ವಾಜಸನೇಯ ಸಂಹಿತೆಗೆ (೪೦ನೆಯ ಅಧ್ಯಾಯ) ಸೇರಿದುದರಿಂದ "ವಾಜಸನೇಯಸಂಹಿತೋಪನಿಷತ್" ಎಂದೂ ಕರೆಯುವುದುಂಟು. ಆದರೆ ಸಂಹಿತೆಯ ಪಾಠಕ್ಕೂ ಉಪನಿಷತ್ತಿನ ಪಾಠಕ್ಕೂ ಸ್ವಲ್ಪ ಭೇದವಿದೆ. ಈ ಉಪನಿಷತ್ತು ಅತಿ ಮುಖ್ಯವೆಂದು ಗಣಿಸಲ್ಪಟ್ಟಿರುವುದರಿಂದ ಇದರ ಮೇಲೆ ಅನೇಕರು ವ್ಯಾಖ್ಯಾನಮಾಡಿದ್ದಾರೆ. ಆನಂದಾಶ್ರಮದಿಂದ ಪ್ರಕಾಶಿಸಲ್ಪಟ್ಟ ಗ್ರಂಥದಲ್ಲಿ ಆನಂದಗಿರಿಟೀಕೆಯಿಂದ ಕೂಡಿದ ಶಾಂಕರಭಾಷ್ಯವೂ ಉವಟ ಬ್ರಹ್ಮಾನಂದ ಶಂಕರಾನಂದ ರಾಮಚಂದ್ರಪಂಡಿತ ಆನಂದಭಟ್ಟೋಪಾಧ್ಯಾಯ ಅನಂತಾಚಾರ್ಯ ಮೊದಲಾದವರ ವ್ಯಾಖ್ಯಾನಗಳೂ ಇವೆ. ಇವೆಲ್ಲವೂ ಅದ್ವೈತಪರವಾದುವು. ಇತ್ತೀಚೆಗೆ ತಿರುಪತಿ ವೆಂಕಟೇಶ್ವರ ಓರಿಯೆಂಟಲ್ ಸೀರೀಸ್‌ನಲ್ಲಿ ಶ್ರೀವೇದಾಂತದೇಶಿಕರ ಈಶೋಪನಿಷದ್ಭಾಷ್ಯವು ಆಂಗ್ಲಾನುವಾದ ಮತ್ತು ಸಂಸ್ಕೃತ ಟಿಪ್ಪಣಿ ಇವುಗಳೊಂದಿಗೆ ಪ್ರಕಟವಾಗಿದೆ. ದೇಶಿಕರ ಭಾಷ್ಯದ ಮೇಲೆ ಶ್ರೀಕೂರನಾರಾಯಣಸ್ವಾಮಿಗಳೂ ಪುರಿಶೈ ಶ್ರೀರಂಗಾಚಾರ್ಯಸ್ವಾಮಿಗಳೂ ಟೀಕೆಗಳನ್ನು ಬರೆದಿದ್ದಾರೆ.

ಇದು ಬಹಳ ಸಣ್ಣ ಉಪನಿಷತ್; ಆದರೂ ಇದರ ತಾತ್ಪರ್ಯವನ್ನು ಸರಿಯಾಗಿ ತಿಳಿದುಕೊಳ್ಳುವುದು ಕಷ್ಟ. ಮಂತ್ರಗಳ ಅರ್ಥವನ್ನು ತಿಳಿದುಕೊಂಡರೂ ಮಂತ್ರಗಳ ಅನ್ಯೋನ್ಯಸಂಬಂಧವನ್ನು ತಿಳಿದುಕೊಳ್ಳುವುದು ಅತ್ಯಂತ ಕಷ್ಟ. ಪ್ರಾಚೀನ ಉಪನಿಷತ್ತುಗಳ ಕಾಲದಲ್ಲಿ ಒಂದು ದೊಡ್ಡ ಚರ್ಚೆ ಎದ್ದಂತೆ ಕಾಣುತ್ತದೆ: ಪುರುಷಾರ್ಥಪ್ರಾಪ್ತಿಗೆ ಯಾವುದು ಉತ್ಕೃಷ್ಟಸಾಧನ? ಕರ್ಮವೋ, ಜ್ಞಾನವೋ ಅಥವಾ ಇವೆರಡರ ಸಮುಚ್ಚಯವೋ? ಸ್ವರ್ಗಪ್ರಾಪ್ತಿರೂಪವಾದ ಕರ್ಮಫಲವು ಅನಿತ್ಯವಾದುದರಿಂದ ಶುದ್ಧಜ್ಞಾನವೇ ಶಾಶ್ವತಮೋಕ್ಷಕ್ಕೆ ಸಾಧನವೆಂದು ಉಪನಿಷತ್ತುಗಳೇ ಸ್ವಯಂ ಒಪ್ಪಿಕೊಂಡಿರುವಂತೆ ಕಾಣುತ್ತದೆ. "ಕರ್ಮವು ಶ್ರೇಯಸ್ಸೆಂದು ಯಾವ ಮೂಢರು ಹಿಗ್ಗುವರೋ ಅವರು ಜರಾಮೃತ್ಯುಗಳನ್ನು

ಪುನಃ ಹೊಂದುವರು,"[೧] "ಕರ್ಮದಿಂದ ಆಗಿರುವ ಲೋಕಗಳನ್ನು ಪರಿಶೀಲಿಸಿ 'ಅಕೃತವಾದದ್ದು ಕೃತದಿಂದ ಆಗುವುದಿಲ್ಲ' ಎಂದು ವೈರಾಗ್ಯವನ್ನು ಹೊಂದಬೇಕು."[೨] ಇಲ್ಲಿ ಕರ್ಮವೆಂದರೆ ದೇವತೆಗಳನ್ನು ಉದ್ದೇಶಿಸಿ ಮಾಡಿದ ಯಜ್ಞಕರ್ಮಗಳೆಂಬುದರಲ್ಲಿ ಸಂದೇಹವಿಲ್ಲ. ಲೋಕವ್ಯವಹಾರಗಳಿಗೆ ಕರ್ಮವೆಂದು ಹೇಳಿಲ್ಲ. ಮುಮುಕ್ಷುವು "ಅದೃಢವೂ ಪ್ಲವರೂಪವೂ ಆದ ಹದಿನೆಂಟು ಕರ್ಮಗಳನ್ನು"[೩] ಬಿಟ್ಟು ಎಂದರೆ ಗೃಹಸ್ಥಾಶ್ರಮವನ್ನು ತ್ಯಾಗಮಾಡಿ ಬ್ರಹ್ಮವಿದ್ಯೆಗಾಗಿ ಸಂನ್ಯಾಸವನ್ನು ಸ್ವೀಕರಿಸಬೇಕೆಂಬುದು ಕೆಲವು ಉಪನಿಷತ್ತುಗಳ ತಾತ್ಪರ್ಯ. ಇದು ಶ್ರೀಶಂಕರಾಚಾರ್ಯರಿಗೆ ಪ್ರಿಯವಾದ ಮತ. ಅವರು ಈ ದೃಷ್ಟಿಯಿಂದ ಇತರ ಉಪನಿಷತ್ತುಗಳಂತೆಯೇ ಈ ಉಪನಿಷತ್ತಿನ ಮೇಲೂ ವ್ಯಾಖ್ಯಾನ ಮಾಡಿರುತ್ತಾರೆ.

ಇದಲ್ಲದೆ ಇನ್ನೊಂದು ಅಭಿಪ್ರಾಯವು ಕೆಲವು ಉಪನಿಷತ್ತುಗಳಲ್ಲಿ ಅಂತರ್ಗತವಾಗಿರುವಂತೆ ಕಾಣುತ್ತದೆ. ಇದಕ್ಕೆ ಈಶಾವಾಸ್ಯೋಪನಿಷತ್ತೇ ಒಂದು ನಿದರ್ಶನ. ಜ್ಞಾನರಹಿತವಾದ ಬರಿಯ ಕರ್ಮದಿಂದ ಏನೂ ಪ್ರಯೋಜನವಿಲ್ಲ. ಕರ್ಮವು ಜ್ಞಾನಕ್ಕೆ ಅಂಗವಾಗಿದ್ದರೆ ಅಥವಾ ಸಹಕಾರಿಯಾಗಿದ್ದರೆ ಜ್ಞಾನೋತ್ಪತ್ತಿಗೆ ಕಾರಣವಾಗುವುದು. ಈ ದೃಷ್ಟಿಯಿಂದ ಸಾಧಕನು ಫಲಾಸಕ್ತಿಯನ್ನು ಬಿಟ್ಟು ಕರ್ಮವನ್ನು ಅನುಷ್ಠಿಸಿದರೆ ಕರ್ಮದ ಮೂಲಕ ಚಿತ್ತಶುದ್ಧಿಯನ್ನು ಹೊಂದಿ ಅನಂತರ ಜ್ಞಾನದ ದ್ವಾರಾ ನಿಃಶ್ರೇಯಸ್ಸನ್ನು ಪಡೆಯುತ್ತಾನೆ. ಕರ್ಮಜ್ಞಾನಗಳಿಗೆ ಇಲ್ಲಿ ಯಾವ ವಿಧವಾದ ವಿರೋಧವಿಲ್ಲ ಈ ಸಮುಚ್ಚಯಕ್ಕೆ ವಿಷಮ-ಸಮುಚ್ಚಯವೆಂದು ಹೆಸರು. ಕರ್ಮವು ಪ್ರಧಾನವಾದ ಜ್ಞಾನಕ್ಕೆ

---

೧ ಏತಚ್ಛ್ರೇಯೋ ಯೇಽಭಿನಂದಂತಿ ಮೂಢಾ
ಜರಾಮೃತ್ಯುಂ ತೇ ಪುನರೇವಾಪಿಯಂತಿ ।
ಮುಂಡಕೋಪನಿಷತ್ ೧-೨-೭

೨ ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ
ನಿರ್ವೇದಮಾಯನ್ನಾಸ್ತ್ಯಕೃತಃ ಕೃತೇನ ।
ಅದೇ ೧-೨-೩

೩ ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾ
ಅಷ್ಟಾದಶೋಕ್ತಮವರಂ ಯೇಷು ಕರ್ಮ ।
ಅದೇ ೧-೨-೭

ಉಪಾಂಗವಾಗಿ ಜ್ಞಾನವನ್ನು ಉಂಟುಮಾಡಲು ಸಹಕಾರಿಯಾಗುತ್ತದೆ ಕರ್ಮಕ್ಕೆ ಸ್ವತಂತ್ರವಾಗಿ ಫಲವನ್ನುಂಟುಮಾಡಲು ಸಾಧ್ಯವಿಲ್ಲ. ಸಮ-ಸಮುಚ್ಚಯದಲ್ಲಿ ಇಂತಹ ಅಂಗಾಂಗಿ-ಸಂಬಂಧವಿಲ್ಲದೆ ಕರ್ಮಜ್ಞಾನಗಳು ಸ್ವತಂತ್ರವಾಗಿ ಫಲಕಾರಿಯಾಗುತ್ತವೆ. ಶ್ರೀಮದ್ರಾಮಾನುಜಾಚಾರ್ಯರು ವಿಷಮ-ಸಮುಚ್ಚಯವನ್ನು ಒಪ್ಪಿಕೊಂಡಿರುತ್ತಾರೆ.

ಶಾಂಕರಭಾಷ್ಯದ ಪ್ರಕಾರ ಮಂತ್ರಗಳ ವಿಶ್ಲೇಷಣವು ಹೀಗಿದೆ:

ಈ ವ್ಯಾಖ್ಯಾನದ ಪ್ರಕಾರ ಈಶೋಪನಿಷತ್ತಿನ ಏಳು ಮಂತ್ರಗಳು (೧ ಮತ್ತು ೩ರಿಂದ ೮) ಮಾತ್ರ ಪರಬ್ರಹ್ಮನ ಸ್ವರೂಪವನ್ನು ನಿರೂಪಿಸುತ್ತವೆ ಇತರ ಮಂತ್ರಗಳು ಆತ್ಮನನ್ನು ಅರಿಯದ ಅಜ್ಞಾನಿಗಳಿಗೆ ಅನ್ವಯಿಸುತ್ತವ. ಇವರು ದೃಷ್ಟಾದೃಷ್ಟಭೋಗಗಳನ್ನು ಹೊಂದಬೇಕೆಂಬ ಆಶೆಯಿಂದ ಸಂಸಾರದಲ್ಲಿ ಆಸಕ್ತರಾಗಿ ಯಜ್ಞಯಾಗಗಳ ಅನುಷ್ಠಾನದಲ್ಲಿ ಅಥವಾ ದೇವತೆಗಳ ಉಪಾಸನೆಯಲ್ಲಿ ನಿರತರಾಗಿರುತ್ತಾರೆ

೧ ಮೊದಲನೆಯ ಮಂತ್ರವು ಆತ್ಮನ ಅದ್ವೈತಸ್ವರೂಪವನ್ನು ನಿರೂಪಿಸಿ ಆತ್ಮನಲ್ಲಿ ಅಧ್ಯಸ್ತವಾಗಿರುವ ಕರ್ತೃತ್ವಭೋಕ್ತೃತ್ವಾದಿಲಕ್ಷಣಗಳಿಂದ ಕೂಡಿದ ದ್ವೈತರೂಪವಾದ ಜಗತ್ತು ಮಿಥ್ಯೆಯೆಂದು ಉಪದೇಶಿಸುತ್ತೆ

೨. ಮೇಲೆ ಹೇಳಿದಂತೆ ಆತ್ಮನನ್ನು ಅರಿತುಕೊಳ್ಳಲು ಶಕ್ತಿಯಿಲ್ಲದವನಿಗೆ ಎರಡನೆಯ ಮಂತ್ರವು ಕರ್ಮನಿಷ್ಠೆಯನ್ನು ಉಪದೇಶಮಾಡಿದೆ

೩. ಮೂರನೆಯ ಮಂತ್ರವು ಅಜ್ಞಾನಿಗಳನ್ನು ನಿಂದಿಸಿದೆ.

೪ ನಾಲ್ಕನೆಯ ಮಂತ್ರವು ಆತ್ಮತತ್ತ್ವವನ್ನು ವಿವರಿಸಿದೆ

೫. ಐದನೆಯ ಮಂತ್ರವು ಹಿಂದಿನ ಮಂತ್ರದ ಅರ್ಥವನ್ನೇ ವಿವರಿಸಿದೆ

೬. ಶುದ್ಧವಾದ ಒಂದೇ ಆತ್ಮತತ್ತ್ವವನ್ನು ನೋಡುವವನಿಗೆ ನಿಂದಿಸಲು ಕಾರಣವಾದ ಬೇರೆಯಾವ ವಸ್ತುವೂ ಇರುವುದಿಲ್ಲ ಅನುಭವಸಿದ್ಧವಾದ ಮಾತನ್ನೇ ಇಲ್ಲಿ ಶ್ರುತಿಯು ಹೇಳಿದೆ ಎಂಬುದು ಆರನೆಯ ಮಂತ್ರದ ಅರ್ಥ

೭. ಏಳನೆಯ ಮಂತ್ರವು ಹಿಂದಿನ ಮಂತ್ರದ ಅಭಿಪ್ರಾಯವನ್ನೇ ಹೇಳಿದೆ.

೮. ಎಂಟನೆಯ ಮಂತ್ರವು ಪರಬ್ರಹ್ಮದ ಸ್ವರೂಪವನ್ನು ವಿವರಿಸಿದೆ

೯–೧೧ ಈ ಮೂರು ಮಂತ್ರಗಳು ಒಂದು ಗುಂಪಿಗೆ ಸೇರಿದುವು ಅವಿದ್ಯೆಯೆಂದರೆ ಅಗ್ನಿಹೋತ್ರಾದಿ-ವೈದಿಕಕರ್ಮಗಳು ವಿದ್ಯೆಯೆಂದರೆ ಕರ್ಮವಿಹೀನವಾದ ದೇವತಾವಿಷಯಕ-ಜ್ಞಾನ ಅವಿದ್ಯೋಪಾಸನೆಯ ಮೂಲಕ ಪಿತೃಲೋಕವನ್ನೂ ವಿದ್ಯೋಪಾಸನೆಯ ಮೂಲಕ ದೇವಲೋಕವನ್ನೂ ಕರ್ಮೋಪಾಸಕರು ಹೊಂದುತ್ತಾರೆ ಆಪೇಕ್ಷಿಕವಾದ ಅಮೃತತ್ವವನ್ನು

ಪಡೆಯಲು ಕರ್ಮಜ್ಞಾನಗಳ ಸಮುಚ್ಚಯವು ಸುಲಭಸಾಧನವೆಂದು ಹನ್ನೊಂದನೆಯ ಮಂತ್ರದಲ್ಲಿ ಸೂಚಿಸಿದೆ

೧೨–೧೪ ಈ ಮೂರು ಮಂತ್ರಗಳು ಎರಡನೆಯ ಗುಂಪಿಗೆ ಸೇರಿದುವು 'ಅಸಂಭೂತಿ' ಎಂದರೆ ಅವ್ಯಾಕೃತವೆಂಬ ಹೆಸರಿನ ಪ್ರಕೃತಿ. 'ಸಂಭೂತಿ'ಯೆಂದರೆ ಹಿರಣ್ಯಗರ್ಭನೆಂಬ ಕಾರ್ಯ-ಬ್ರಹ್ಮ. ಸಂಭೂತಿ-ಅಸಂಭೂತಿಗಳ ಧ್ಯಾನದ ಫಲವು ಬೇರೆಯಾಗಿರುವುದರಿಂದ ಆ ಎರಡು ಉಪಾಸನೆಗಳನ್ನೂ ಸೇರಿಸಬೇಕೆಂದು ಹದಿನಾಲ್ಕನೆಯ ಮಂತ್ರವು ಉಪದೇಶಿಸುತ್ತದೆ. ಈ ಮಂತ್ರದಲ್ಲಿ ಮೊದಲನೆಯ ಪದವಾದ 'ಸಂಭೂತಿ' ಎಂಬುದನ್ನು 'ಅಸಂಭೂತಿ' ಎಂದು ಗ್ರಹಿಸಬೇಕೆಂದೂ 'ವಿನಾಶ' ಎಂಬುದನ್ನು 'ಸಂಭೂತಿ' ಎಂದು ಗ್ರಹಿಸಬೇಕೆಂದೂ ಆಚಾರ್ಯರು ಹೇಳಿದ್ದಾರೆ.

೧೫–೧೮. ಏಷಣಗಳನ್ನು ಬಿಡದೆ ಜನ್ಮದಿಂದ ಮರಣದ ವರೆಗ ಕರ್ಮಮಾರ್ಗದಲ್ಲಿ ಪ್ರವೃತ್ತನಾಗಿ ಅಪರಬ್ರಹ್ಮವನ್ನು ಉಪಾಸಿಸುತ್ತಿರುವ ಸಾಧಕನು, ಯಾವ ಮಾರ್ಗದ ಮೂಲಕ ಆಪೇಕ್ಷಿಕವಾದ ಅಮೃತತ್ವವನ್ನು ಹೊಂದುವನೆಂದು, ಈ ನಾಲ್ಕು ಮಂತ್ರಗಳಲ್ಲಿ ಹೇಳಿದೆ. ಮರಣಕಾಲವು ಒದಗಿದಾಗ ಉಪಾಸಕನು ಈ ರೀತಿ ಪ್ರಾರ್ಥನೆಮಾಡುತ್ತಾನೆ

ನಿತ್ಯಕರ್ಮ-ಬ್ರಹ್ಮವಿದ್ಯೆಗಳಲ್ಲಿ ಯಾವ ವಿಧವಾದ ಭೇದವನ್ನೂ ಕಲ್ಪಿಸದೆ ಸಮವಾಗಿ ಅನುಷ್ಠಾನಮಾಡುವುದೇ ಈಶೋಪನಿಷತ್ತಿನ ವಿಶೇಷೋಪದೇಶ. ಕಾಮ್ಯಕರ್ಮಗಳನ್ನು ತ್ಯಜಿಸಿ ಈಶ್ವರಸೇವೆಗಾಗಿ ಮತ್ತು ಲೋಕಸಂಗ್ರಹಕ್ಕಾಗಿ ನಿತ್ಯಕರ್ಮಗಳನ್ನು ಮಾಡುತ್ತ ನೂರು ವರ್ಷ ಬಾಳಲು ಇಚ್ಛಿಸಬೇಕು. ಉಪಾಸಕನು ಜ್ಞಾನಕ್ಕೆ ಸಹಾಯವಾಗುವ ಕರ್ಮಗಳನ್ನೇ ಮಾಡುವುದರಿಂದ ಕರ್ಮದ ಸ್ವಾಭಾವಿಕದೋಷಗಳು ಅವನಿಗೆ ಅಂಟವು. ಎಲ್ಲವೂ ಈಶನಿಗೆ ಸೇರಿದೆ ಎಂಬ ಜ್ಞಾನದಿಂದ ನಿರ್ಮಮತ್ವವು ಸಿದ್ಧಿಸಿದರೆ ಶೋಕವೆಲ್ಲಿ? ಮೋಹವೆಲ್ಲಿ? ಇದು ಈ ಉಪನಿಷತ್ತಿನ ಸಾರ.

ಈ ಮಾಲೆಯಲ್ಲಿ ಪ್ರಕಟವಾಗಿರುವ ಇತರ ಉಪನಿಷತ್ತುಗಳಂತೆ ಇಲ್ಲಿಯೂ ಕೂಡ ಪ್ರತಿಪದಾರ್ಥ-ತಾತ್ಪರ್ಯ-ಟಿಪ್ಪಣಿಗಳು ಶಾಂಕರಭಾಷ್ಯವನ್ನೇ ಅವಲಂಬಿಸಿವೆ.

ಶ್ರೀರಾಮಕೃಷ್ಣಾಶ್ರಮ
ಮಂಗಳೂರು

ಸ್ವಾಮಿ ಆದಿದೇವಾನಂದ

# ಶಾಂತಿಪಾಠ

## ಹರಿಃ ಓಂ

ಪೂರ್ಣಮದಃ ಪೂರ್ಣಮಿದಂ
ಪೂರ್ಣಾತ್ ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ
ಪೂರ್ಣಮೇವಾವಶಿಷ್ಯತೇ ॥

ಓಂ ಶಾಂತಿಃ ಶಾಂತಿಃ ಶಾಂತಿಃ

ಅದಃ = ಅದು ಪೂರ್ಣಂ = ಪೂರ್ಣವು, ಇದಂ = ಇದು ಪೂರ್ಣಂ = ಪೂರ್ಣವು; ಪೂರ್ಣಾತ್ = ಪೂರ್ಣದಿಂದ ಪೂರ್ಣಂ = ಪೂರ್ಣವು ಉದಚ್ಯತೇ = ಹೊರಟುಬಂದಿದೆ, ಪೂರ್ಣಸ್ಯ = ಪೂರ್ಣದ ಪೂರ್ಣಂ = ಪೂರ್ಣವನ್ನು ಆದಾಯ = ತೆಗೆದ ಮೇಲೆ ಪೂರ್ಣಂ ಏವ = ಪೂರ್ಣವೇ ಅವಶಿಷ್ಯತೇ = ಉಳಿಯುತ್ತದೆ

## ಹರಿಃ ಓಂ

ಅದು (ಪರಬ್ರಹ್ಮವು) ಪೂರ್ಣವು. ಇದು (ವ್ಯಕ್ತವಾದ ಜಗತ್ತು) ಪೂರ್ಣವು; ಪೂರ್ಣದಿಂದ (ಪರಬ್ರಹ್ಮದಿಂದ) ಪೂರ್ಣವು (ಜಗತ್ತು) ಹೊರಟು ಬಂದಿದೆ; ಪೂರ್ಣದ (ಜಗತ್ತಿನ) ಪೂರ್ಣತ್ವವನ್ನು (ಬ್ರಹ್ಮತ್ವವನ್ನು) ತೆಗೆದ ಮೇಲೆ (ಗ್ರಹಿಸಿದ ಮೇಲೆ) ಪೂರ್ಣವೇ (ಪರಬ್ರಹ್ಮವೇ) ಉಳಿಯುತ್ತದೆ.

ಓಂ ಶಾಂತಿಃ ಶಾಂತಿಃ ಶಾಂತಿಃ

# ಈಶಾವಾಸ್ಯೋಪನಿಷತ್

ಈಶಾ ವಾಸ್ಯಮಿದಂ ಸರ್ವಂ
ಯತ್ಕಿಂಚ ಜಗತ್ಯಾಂ ಜಗತ್
ತೇನ ತ್ಯಕ್ತೇನ ಭುಂಜೀಥಾ
ಮಾ ಗೃಧಃ ಕಸ್ಯ ಸ್ವಿದ್ಧನಮ್

**ಜಗತ್ಯಾಂ** = ಜಗತ್ತಿನಲ್ಲಿ **ಯತ್ ಕಿಂಚ** = ಏನೇನು **ಜಗತ್** = ಚಲನಾತ್ಮಕವಾದದ್ದು (**ಅಸ್ತಿ** = ಇದೆಯೋ) **ಇದಂ ಸರ್ವಂ** = ಇದೆಲ್ಲವೂ **ಈಶಾ** = ಈಶನಿಂದ **ವಾಸ್ಯಂ** = ಮುಚ್ಚಲ್ಪಡತಕ್ಕದ್ದು, **ತೇನ ತ್ಯಕ್ತೇನ** ಅವರ ತ್ಯಾಗದಿಂದ **ಭುಂಜೀಥಾಃ** = ಕಾಪಾಡಿಕೊ; **ಕಸ್ಯಸ್ವಿತ್** = ಯಾರ **ಧನಂ** = ಧನವನ್ನು **ಮಾ ಗೃಧಃ** = ಬಯಸಬೇಡ.

೧. (ಈ) ಜಗತ್ತಿನಲ್ಲಿ ಚಲನಾತ್ಮಕವಾದದ್ದು ಏನೇನಿದೆಯೋ ಇದೆಲ್ಲವೂ ಈಶನಿಂದ[೧] ಮುಚ್ಚಲ್ಪಡತಕ್ಕದ್ದು.[೨] ಅವರ ತ್ಯಾಗದಿಂದ (ನಿನ್ನನ್ನು) ಕಾಪಾಡಿಕೊ.[೩] ಯಾರ[೪] ಧನವನ್ನೂ ಬಯಸಬೇಡ.

[ಆತ್ಮನನ್ನು ಅರಿತಿರುವವನು ಪುತ್ರೈಷಣೇ ಮೊದಲಾದ ಏಷಣಾತ್ರಯವನ್ನು ಬಿಟ್ಟು ಆತ್ಮ-ಜ್ಞಾನನಿಷ್ಠೆಯ ಮೂಲಕ ತನ್ನನ್ನು ರಕ್ಷಿಸಿಕೊಳ್ಳಬೇಕೆಂದು ಈ ಮಂತ್ರದಲ್ಲಿ ಹೇಳಿದೆ

೧ ಪರಮೇಶ್ವರನಿಂದ ಅಥವಾ ಪರಮಾತ್ಮನಿಂದ; ಪರಮಾತ್ಮನು ಪ್ರತ್ಯಗಾತ್ಮರೂಪ ದಿಂದ ಸರ್ವಪ್ರಾಣಿಗಳ ಆತ್ಮನಾಗಿ ಎಲ್ಲವನ್ನೂ ಆಳುತ್ತಿರುವನು

೨ ಶ್ರೀಗಂಧದ ಮರದ ಒಂದು ತುಂಡಿಗೆ ನೀರಿನ ಸಂಬಂಧದಿಂದ ಉಂಟಾಗುವ ದುರ್ಗಂಧವು ಆ ಮರದ ತುಂಡನ್ನು ಕಲ್ಲಿನ ಮೇಲೆ ತೇಯುವುದರಿಂದ ಉಂಟಾಗುವ ಸ್ವಾಭಾವಿಕ ಸುಗಂಧದಿಂದ ಮುಚ್ಚಲ್ಪಡುವಂತೆ ಆತ್ಮನಲ್ಲಿ ಅಧ್ಯಸ್ತವಾಗಿರುವ ಅನಿತ್ಯವೂ ದ್ವೈತರೂಪವೂ ಆದ ಜಗತ್ತು ಆತ್ಮಭಾವನೆಯಿಂದ ಬಿಟ್ಟುಹೋಗುವುದು.

೩ ಸರ್ವಸಂಗಪರಿತ್ಯಾಗದಿಂದ ಆತ್ಮರಕ್ಷಣೆಯು ಸಾಧ್ಯವೇ ವಿನಾ ವಿಷಯಭೋಗದಿಂದ ಸಾಧ್ಯವಲ್ಲ.

೪ ಮತ್ತೊಬ್ಬನ ಅಥವಾ ತನ್ನ.]

ಕುರ್ವನ್ನೇವೇಹ ಕರ್ಮಾಣಿ
ಜಿಜೀವಿಷೇಚ್ಛತಂ ಸಮಾಃ ।
ಏವಂ ತ್ವಯಿ ನಾನ್ಯಥೇತೋಽಸ್ತಿ
ನ ಕರ್ಮ ಲಿಪ್ಯತೇ ನರೇ ॥ ೨ ॥

ಇಹ = ಈ ಜಗತ್ತಿನಲ್ಲಿ ಕರ್ಮಾಣಿ = ಕರ್ಮಗಳನ್ನು ಕುರ್ವನ್ ಏವ = ಮಾಡುತ್ತಲೇ ಶತಂ = ನೂರು ಸಮಾಃ = ವರ್ಷಗಳು ಜಿಜೀವಿಷೇತ್ = ಜೀವಿಸಲು ಇಚ್ಛೆಪಡಬೇಕು. ಏವಂ = ಹೀಗೆ ನರೇ ತ್ವಯಿ = ಮನುಷ್ಯನಾದ ನಿನಗೆ ಇತಃ = ಇದಕ್ಕಿಂತ ಅನ್ಯಥಾ = ಭಿನ್ನವಾದ (ಉಪಾಯ) ನ ಅಸ್ತಿ = ಇಲ್ಲ [ಯೇನ = ಯಾವುದರಿಂದ] ಕರ್ಮ = ಕರ್ಮವು ನ ಲಿಪ್ಯತೇ = (ನಿನಗೆ) ಅಂಟುವುದಿಲ್ಲ

೨. ಈ ಲೋಕದಲ್ಲಿ (ಶಾಸ್ತ್ರವಿಹಿತವಾದ) ಕರ್ಮಗಳನ್ನು ಮಾಡುತ್ತಲೇ ನೂರು ವರ್ಷ ಜೀವಿಸಲು ಇಚ್ಛೆಪಡಬೇಕು. ಹೀಗಿರುವ ಮನುಷ್ಯನಾದ ನಿನಗೆ (ಅಶುಭ)ಕರ್ಮವು ಅಂಟಿಕೊಳ್ಳದ (ಉಪಾಯವು) ಬೇರೆ[೧] ಯಾವುದೂ ಇಲ್ಲ.

[ಅನಾತ್ಮಜ್ಞನಾಗಿ ಆತ್ಮನನ್ನು ಅರಿತುಕೊಳ್ಳಲು ಶಕ್ತಿಯಿಲ್ಲದವನಿಗೆ ಈ ಮಂತ್ರವು ಕರ್ಮನಿಷ್ಠೆಯನ್ನು ಉಪದೇಶಮಾಡಿದೆ.

[೧] ಶಾಸ್ತ್ರವಿಹಿತವಾದ ಕರ್ಮಕ್ಕಿಂತ ಬೇರೆ.]

ಅಸುರ್ಯಾ ನಾಮ ತೇ ಲೋಕಾ
ಅಂಧೇನ ತಮಸಾವೃತಾಃ ।
ತಾಂಸ್ತೇ ಪ್ರೇತ್ಯಾಭಿಗಚ್ಛಂತಿ
ಯೇ ಕೇ ಚಾತ್ಮಹನೋ ಜನಾಃ ॥ ೩ ॥

ಅಸುರ್ಯಾಃ ನಾಮ = ಅಸುರಸಂಬಂಧವುಳ್ಳ ತೇ ಲೋಕಾಃ = ಆ ಲೋಕಗಳು ಅಂಧೇನ ತಮಸಾ = ಕುರುಡುಗತ್ತಲೆಯಿಂದ ಆವೃತಾಃ = ಆವರಿಸಲ್ಪಟ್ಟಿವೆ, ಯೇ ಕೇ ಚ = ಯಾರು ಯಾರು ಆತ್ಮಹನಃ ಜನಾಃ = ಆತ್ಮಘಾತಿಗಳಾದ ಜನರೋ ತೇ = ಅವರು ಪ್ರೇತ್ಯ = ಮೃತಿಹೊಂದಿ ತಾನ್ = ಅವುಗಳನ್ನು ಅಭಿಗಚ್ಛಂತಿ = ಸೇರುತ್ತಾರೆ, ಪಡೆಯುತ್ತಾರೆ.

೩. ಅಸುರಸಂಬಂಧವುಳ್ಳ[೧] ಆ ಲೋಕಗಳು[೨] ಕುರುಡುಗತ್ತಲೆಯಿಂದ ಆವರಿಸಲ್ಪಟ್ಟಿವೆ.[೩] ಆತ್ಮಘಾತಿಗಳಾದ[೪] ಜನರು ಮೃತರಾದ ಮೇಲೆ ಅವುಗಳನ್ನು ಪಡೆಯುತ್ತಾರೆ.

[ಈಗ ಅಜ್ಞಾನಿಯನ್ನು ನಿಂದಿಸುವುದಕ್ಕಾಗಿ ಈ ಮಂತ್ರವನ್ನು ಪ್ರಾರಂಭಿಸಿದೆ

೧ 'ಅಸುರ್ಯಾಃ' ಎಂದರೆ ಕೇವಲ ಅಸುರರ ಅಥವಾ ರಾಕ್ಷಸರ ಲೋಕಗಳಲ್ಲ, ಅದ್ವಯ ವಾದ ಪರಮಾತ್ಮಭಾವದ ದೃಷ್ಟಿಯಿಂದ ಅನಾತ್ಮಜ್ಞರಾದ ದೇವತೆಗಳನ್ನೂ ಕೂಡ ಅಸುರ ರೆಂದೇ ಪರಿಗಣಿಸಬೇಕು ಅಂತಹವರ ಸ್ಥಾನಗಳು ಅಥವಾ ಜನ್ಮಗಳು ಅಸುರ್ಯವೆನಿಸುವುವು.

೨ ಕರ್ಮಫಲಗಳಾದ ಜನ್ಮಗಳು.

೩ ತತ್ತ್ವವು ಕಾಣದಿರುವ ಅಜ್ಞಾನವೆಂಬ ಕತ್ತಲೆಯಿಂದ ಆಚ್ಛಾದಿತವಾಗಿದೆ

೪ ಆತ್ಮನನ್ನು ಅರಿಯದ ಜನರು.]

ಅನೇಜದೇಕಂ ಮನಸೋ ಜವೀಯೋ
ನೈನದ್ದೇವಾ ಆಪ್ನುವನ್ ಪೂರ್ವಮರ್ಷತ್ ।
ತದ್ಧಾವತೋಽನ್ಯಾನತ್ಯೇತಿ ತಿಷ್ಠತ್
ತಸ್ಮಿನ್ನಪೋ ಮಾತರಿಶ್ವಾ ದಧಾತಿ ॥ ೪ ॥

(ತತ್ = ಆ ಆತ್ಮತತ್ತ್ವವು) ಅನೇಜತ್ = ಅಚಲವು, ಏಕಂ = ಒಂದೇ, ಮನಸಃ = ಮನಸ್ಸಿಗಿಂತ ಜವೀಯಃ = ವೇಗವುಳ್ಳದ್ದು, ದೇವಾಃ = ಇಂದ್ರಿಯಗಳು ಏನತ್ = ಇದನ್ನು ನ ಆಪ್ನುವನ್ = ಪಡೆಯಲಿಲ್ಲ; ಪೂರ್ವಂ = ಮುಂದೆ ಅರ್ಷತ್ = ಹೋಗಿರುತ್ತದೆ ತತ್ = ಅದು ತಿಷ್ಠತ್ = ನಿಂತುಕೊಂಡೇ ಧಾವತಃ = ಓಡುತ್ತಿರುವ ಅನ್ಯಾನ್ = ಇತರರನ್ನು ಅತ್ಯೇತಿ = ದಾಟುತ್ತದೆ, ತಸ್ಮಿನ್ (ಸತಿ) ಅದು (ಇರುವಾಗ) ಮಾತರಿಶ್ವಾ = ವಾಯುವು ಅಪಃ = ಕಾರ್ಯಸಮೂಹವನ್ನು ದಧಾತಿ = ಧರಿಸುತ್ತದೆ, ನಡೆಸುತ್ತದೆ

೪. (ಆ ಆತ್ಮತತ್ತ್ವವು) ಅಚಲವು,[೧] (ಸರ್ವಪ್ರಾಣಿಗಳಲ್ಲಿಯೂ) ಒಂದೇ; ಅದು ಮನಸ್ಸಿಗಿಂತ ವೇಗವುಳ್ಳದ್ದು. ಪೂರ್ವಗಾಮಿಯಾದ ಇದನ್ನು ಇಂದ್ರಿಯ ಗಳೂ ಪಡೆಯಲಿಲ್ಲ.[೨] ಅದು ನಿಂತುಕೊಂಡೇ ಓಡುತ್ತಿರುವ ಇತರ (ವಸ್ತು ಗಳನ್ನು)[೩] ದಾಟುತ್ತದೆ ಅದು (ಇರುವಾಗ) ವಾಯುವು[೪] (ಪ್ರಾಣಿಗಳ) ಕಾರ್ಯಗಳನ್ನು ನಡೆಸುತ್ತದೆ.

[ಯಾವ ಆತ್ಮಹತ್ಯದಿಂದ ಅಜ್ಞಾನಿಗಳು ಪುನರ್ಜನ್ಮವನ್ನು ಪಡೆಯುತ್ತಾರೆಯೋ, ಅದಕ್ಕೆ ಪ್ರತಿಯಾಗಿ ಆತ್ಮಹತ್ಯವನ್ನು ಮಾಡದ ಜ್ಞಾನಿಗಳು ಮುಕ್ತರಾಗುತ್ತಾರೆಯೊ ಅಂಥ ಆತ್ಮ-ತತ್ತ್ವದ ಸ್ವರೂಪವು ಯಾವುದು?—ಎಂಬುದನ್ನು ಈಗ ಹೇಳಲಾಗುತ್ತದೆ.

೧ ತನ್ನ ಸ್ವರೂಪವನ್ನು ಬಿಡದೆ ಯಾವಾಗಲೂ ಒಂದೇ ರೂಪವಾಗಿರುವುದು

೨ ಇಂದ್ರಿಯಗಳ ಕಾರ್ಯಗಳು ಮನಸ್ಸನ್ನು ಅವಲಂಬಿಸಿಯೇ ಆಗಬೇಕಾಗಿವೆ. ಮನಸ್ಸಿ ಗಿಂತ ವೇಗವುಳ್ಳ ಆತ್ಮನು ಇಂದ್ರಿಯಗಳಿಗಿಂತ ವೇಗವುಳ್ಳವನೆಂದು ಹೇಳಬೇಕಾಗಿಲ್ಲ. ಆದುದ ರಿಂದ ಇಂದ್ರಿಯಗಳಿಗೆ ಆತ್ಮನ ಆಭಾಸವೂ ಕೂಡ ಆಗುವಹಾಗಿಲ್ಲ.

೩ ಮನಸ್ಸು ವಾಕ್ಕು ಇಂದ್ರಿಯ ಮೊದಲಾದುವುಗಳನ್ನು.

[೪] ಅಂತರಿಕ್ಷದಲ್ಲಿ ಚಲಿಸುವುದರಿಂದ (ಮಾತರಿ ಶ್ವಯತಿ) ವಾಯುವಿಗೆ ಮಾತರಿಶ್ವನೆಂದು ಹೆಸರು ವಾಯುವು ಪ್ರಾಣರೂಪದಿಂದ ಸಮಸ್ತಜೀವಿಗಳ ದೇಹೇಂದ್ರಿಯಕ್ರಿಯೆಗಳನ್ನು ನಡಸುತ್ತದೆ. ಆತ್ಮಚೈತನ್ಯವಿಲ್ಲದಿದ್ದರೆ ಪ್ರಾಣಕ್ಕೆ ಈ ಕಾರ್ಯವು ಸಾಧ್ಯವಾಗುತ್ತಿರಲಿಲ್ಲ ]

**ತದೇಜತಿ ತನ್ನೈಜತಿ ತದ್ದೂರೇ ತದ್ವಂತಿಕೇ ।**
**ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ ॥ ೫ ॥**

**ತತ್** = ಅದು **ಏಜತಿ** = ಚಲಿಸುತ್ತದೆ, **ತತ್** = ಅದು **ನ ಏಜತಿ** = ಚಲಿಸುವುದಿಲ್ಲ, **ತತ್** = ಅದು **ದೂರೇ** = ದೂರದಲ್ಲಿ(ರುವುದು), **ತತ್ ಉ** = ಅದು **ಅಂತಿಕೇ** = ಹತ್ತಿರದಲ್ಲಿ(ರುವುದು); **ತತ್** = ಅದು **ಅಸ್ಯ** = ಈ **ಸರ್ವಸ್ಯ** = ಎಲ್ಲದರ **ಅಂತಃ** = ಒಳಗೆ (ಇರುವುದು). **ತತ್ ಉ** = ಅದು **ಅಸ್ಯ ಸರ್ವಸ್ಯ** = ಇದೆಲ್ಲದರ **ಬಾಹ್ಯತಃ** = ಹೊರಗೆ (ಇರುವುದು)

**೫.** ಅದು[೧] ಚಲಿಸುತ್ತದೆ. ಚಲಿಸುವುದಿಲ್ಲ;[೨] ಅದು ದೂರದಲ್ಲಿದೆ,[೩] ಹತ್ತಿರದಲ್ಲಿದೆ;[೪] ಅದು ಇದೆಲ್ಲದರ[೫] ಒಳಗೂ[೬] ಇದೆ. ಅದು ಇದೆಲ್ಲದರ ಹೊರಗೂ[೭] ಇದೆ.

[ಮಂತ್ರಗಳಲ್ಲಿ ಪುನರುಕ್ತಿದೋಷವಿಲ್ಲದುದರಿಂದ ಹಿಂದೆ ಹೇಳಿದ ಮಂತ್ರದ ಅರ್ಥವನ್ನೇ ಪುನಃ ಹೇಳಲಾಗುತ್ತದೆ.

[೧] ಆತ್ಮತತ್ತ್ವವು.
[೨] ಅದು ಸ್ವರೂಪದಿಂದ ಚಲಿಸದಿದ್ದರೂ ಉಪಾಧಿಯ ಮೂಲಕ ಚಲಿಸುವಂತೆ ಕಾಣುತ್ತದೆ
[೩] ಅಜ್ಞಾನಿಗಳಿಗೆ ದೂರದಲ್ಲಿರುವಂತೆ ಕಾಣುತ್ತದೆ.
[೪] ಜ್ಞಾನಿಗಳ ಆತ್ಮನೇ ಆದುದರಿಂದ ಅತ್ಯಂತ ಸಮೀಪದಲ್ಲಿದೆ.
[೫] ನಾಮರೂಪಕ್ರಿಯಾತ್ಮಕವಾದ ಜಗತ್ತಿನ.
[೬] ನಿರತಿಶಯಸೂಕ್ಷ್ಮವಾಗಿರುವುದರಿಂದ.
[೭] ಆಕಾಶದಂತೆ ವ್ಯಾಪಕವಾಗಿರುವುದರಿಂದ ]

**ಯಸ್ತು ಸರ್ವಾಣಿ ಭೂತಾ-**
**ನ್ಯಾತ್ಮನ್ಯೇವಾನುಪಶ್ಯತಿ ।**
**ಸರ್ವಭೂತೇಷು ಚಾತ್ಮಾನಂ**
**ತತೋ ನ ವಿಜುಗುಪ್ಸತೇ ॥ ೬ ॥**

**ತು** = ಆದರೆ **ಯಃ** = ಯಾವನು **ಸರ್ವಾಣಿ** = ಸಮಸ್ತ **ಭೂತಾನಿ** = ಪ್ರಾಣಿಗಳನ್ನು **ಆತ್ಮನಿ ಏವ** = ಆತ್ಮನಲ್ಲಿಯೇ **ಅನುಪಶ್ಯತಿ** = ನೋಡುವನೋ **ಚ** = ಮತ್ತು **ಸರ್ವ-**

ಭೂತೇಷು=ಎಲ್ಲ ಪ್ರಾಣಿಗಳಲ್ಲಿ ಆತ್ಮಾನಂ=ತನ್ನ ಆತ್ಮನನ್ನು ಅನುಪಶ್ಯತಿ = ನೋಡು ತ್ತಾನೆಯೋ ಸಃ=ಅವನು ತತಃ=ಅದರಿಂದ ನ ವಿಜುಗುಪ್ಸತೇ=ಜುಗುಪ್ಸೆಯನ್ನು ಮಾಡುವುದಿಲ್ಲ

೬. ಯಾವನು ಸರ್ವಪ್ರಾಣಿಗಳನ್ನು ತನ್ನ ಆತ್ಮನಲ್ಲಿಯೇ ನೋಡು ವನೋ,[೧] ಮತ್ತು (ತನ್ನ) ಆತ್ಮನನ್ನು ಸರ್ವಪ್ರಾಣಿಗಳಲ್ಲಿ (ನೋಡುವನೋ ಅವನು) ಆದರಿಂದ[೨] ಜುಗುಪ್ಸೆಯನ್ನು[೩] ಮಾಡುವುದಿಲ್ಲ

[[೧] ಎಂದರೆ ಆತ್ಮನಿಗಿಂತ ಬೇರೆಯಾಗಿ ಕಾಣುವುದಿಲ್ಲ

[೨] ಹಾಗೆ ನೋಡುವುದರಿಂದ

[೩] ಒಂದೇ ಆತ್ಮವಸ್ತುವು ತನಗೂ ಮತ್ತು ಇತರರಿಗೂ ಆತ್ಮವಾಗಿದೆ. ಆತ್ಮ-ವ್ಯತಿರಿಕ್ತ ವಾದ ಯಾವ ವಸ್ತುವೂ ಇಲ್ಲದಿರುವಾಗ ಅಸಹ್ಯತೆಯನ್ನು ತೋರಿಸಲು ಸಾಧ್ಯವಾಗುವುದಿಲ್ಲ.]

ಯಸ್ಮಿನ್ ಸರ್ವಾಣಿ ಭೂತಾ-
ನ್ಯಾತ್ಮೈವಾಭೂದ್ವಿಜಾನತಃ
ತತ್ರ ಕೋ ಮೋಹಃ ಕಶ್ಶೋಕ
ಏಕತ್ವಮನುಪಶ್ಯತಃ

ಯಸ್ಮಿನ್=ಎಲ್ಲಿ (ಯಾವ ಕಾಲದಲ್ಲಿ) ವಿಜಾನತಃ=ತಿಳಿದವನಿಗೆ ಸರ್ವಾಣಿ ಭೂತಾನಿ=ಎಲ್ಲ ಪ್ರಾಣಿಗಳು ಆತ್ಮಾಏವ ಅಭೂತ್=ಆತ್ಮನೇ ಆಗಿದೆಯೋ ತತ್ರ = ಅಲ್ಲಿ ಏಕತ್ವಂ = ಏಕತ್ವವನ್ನು ಅನುಪಶ್ಯತಃ = ನೋಡುತ್ತಿರುವವನಿಗೆ ಕಃ ಮೋಹಃ = ಮೋಹ ವೆಲ್ಲಿ? ಕಃ ಶೋಕಃ = ಶೋಕವೆಲ್ಲಿ?

೭. ಯಾವಾಗ ತಿಳಿದವನಿಗೆ ಎಲ್ಲ ಪ್ರಾಣಿಗಳೂ (ತನ್ನ) ಆತ್ಮನೇ ಆಗಿ- ದೆಯೋ ಅಲ್ಲಿ ಏಕತ್ವವನ್ನು ನೋಡುತ್ತಿರುವವನಿಗೆ[೧] ಮೋಹವೆಲ್ಲಿ? ಶೋಕವೆಲ್ಲಿ?

[ಇನ್ನೊಂದು ಮಂತ್ರವೂ ಇದೇ ಅಭಿಪ್ರಾಯವನ್ನು ತಿಳಿಸುತ್ತದೆ

[೧] ಶೋಕಮೋಹಗಳು ಅಜ್ಞಾನಿಗೆ ಆಗುವುದೇ ಹೊರತು ವಿಶುದ್ಧವಾದ ಆತ್ಮೈಕತ್ವ ವನ್ನು ನೋಡಿದವನಿಗೆ ಆಗಲಾರದು.]

ಸ ಪರ್ಯಗಾಚ್ಛುಕ್ರಮಕಾಯಮವ್ರಣ-
ಮಸ್ನಾವಿರಂ ಶುದ್ಧಮಪಾಪವಿದ್ಧಮ್ ।
ಕವಿರ್ಮನೀಷೀ ಪರಿಭೂಸ್ಸ್ವಯಂಭೂ-
ರ್ಯಾಥಾತಥ್ಯತೋಽರ್ಥಾನ್ ವ್ಯದಧಾಚ್ಛಾ
ಶ್ವತೀಭ್ಯಃ ಸಮಾಭ್ಯಃ ॥ ೮

ಸಃ = ಅವನು ಪರ್ಯಗಾತ್ = ಸರ್ವವ್ಯಾಪಿ ಶುಕ್ರಂ = ಜ್ಯೋತಿರ್ಮಯನು ಅಕಾಯಂ = ಶರೀರವಿಲ್ಲದವನು ಅವ್ರಣಂ = ವ್ರಣವಿಲ್ಲದವನು ಅಸ್ನಾವಿರಂ = ನರಗಳಿಲ್ಲದವನು ಶುದ್ಧಂ = ಶುದ್ಧನು ಅಪಾಪವಿದ್ಧಂ = ಪಾಪದ ಹೊಡೆತವಿಲ್ಲದವನು ಕವಿಃ = ಕವಿಯು ಮನೀಷೀ = ಮನೀಷಿಯು ಪರಿಭೂಃ = ಸರ್ವೋತ್ತಮನು ಸ್ವಯಂಭೂಃ = ಸ್ವಯಂಭು; (ಸಃ = ಅವನು) ಶಾಶ್ವತೀಭ್ಯಃ = ಶಾಶ್ವತರಾದ ಸಮಾಭ್ಯಃ = ಪ್ರಜಾಪತಿಗಳಿಗೆ ಅರ್ಥಾನ್ (ಕರ್ತವ್ಯ) ವಿಷಯಗಳನ್ನು ಯಾಥಾತಥ್ಯತಃ = ಯಥಾನುರೂಪವಾಗಿ ವ್ಯದಧಾತ್ = ಹಂಚಿಕೊಟ್ಟನು.

೮. ಅವನು[೧] ಸರ್ವವ್ಯಾಪಿ, ಜ್ಯೋತಿರ್ಮಯನು, ಶರೀರವಿಲ್ಲದವನು,[೨] ವ್ರಣವಿಲ್ಲದವನು, ನರಗಳಿಲ್ಲದವನು,[೩] ಶುದ್ಧನು,[೪] ಪಾಪದ ಹೊಡೆತವಿಲ್ಲದವನು,[೫] ಕವಿಯು,[೬] ಮನೀಷಿಯು,[೭] ಸರ್ವೋತ್ತಮನು,[೮] ಸ್ವಯಂಭು;[೯] (ಅವನು) ಶಾಶ್ವತರಾದ (ಸಂವತ್ಸರರೆಂಬ ಹೆಸರಿನ) ಪ್ರಜಾಪತಿಗಳಿಗೆ (ಅವರವರ) ಕರ್ತವ್ಯಗಳನ್ನು ಯಥಾನುರೂಪವಾಗಿ[೧೦] ಹಂಚಿಕೊಟ್ಟನು.

[ಹಿಂದಿನ ಮಂತ್ರಗಳಲ್ಲಿ ಹೇಳಲ್ಪಟ್ಟ ಆತ್ಮನು ತನ್ನ ರೂಪದಲ್ಲಿ ಹೇಗಿರುವನೆಂಬುದನ್ನು ಈ ಮಂತ್ರವು ತಿಳಿಸುತ್ತದೆ.

೧ ಆತ್ಮನು.

೨ ಲಿಂಗಶರೀರವಿಲ್ಲದವನು.

೩ 'ಅವ್ರಣಂ ಅಸ್ನಾವಿರಂ' ಎಂದರೆ ಸ್ಥೂಲಶರೀರವಿಲ್ಲದವನು.

೪ ಅವಿದ್ಯೆಯಿಲ್ಲದವನು; ಕಾರಣಶರೀರವಿಲ್ಲದವನು ಎಂದರ್ಥ.

೫ ಧರ್ಮ ಅಧರ್ಮ ಮೊದಲಾದ ಪಾಪಗಳಿಲ್ಲದವನು.

೬ ಕ್ರಾಂತಿದರ್ಶಿ-ಆಚೆ ಇರುವುದನ್ನು ನೋಡಬಲ್ಲವನು.

೭ ಮನಸ್ಸನ್ನು ಆಳುವವನು, ಸರ್ವಜ್ಞ, ಈಶ್ವರ ಎಂದರ್ಥ.

೮ ಎಲ್ಲಕ್ಕೂ ಮೇಲೆ ಇರುವವನು.

೯ ತನ್ನಿಂದ ತಾನೇ ಆಗಿರುವವನು.

೧೦ ಹೇಗಿರಬೇಕೋ ಹಾಗಿರುವುದು; ಕರ್ಮಫಲಗಳನ್ನು ಯಥಾರ್ಥವಾಗಿ ಸಾಧಿಸುವಂತೆ ಎಂದರ್ಥ.]

**ಅಂಧಂ ತಮಃ ಪ್ರವಿಶಂತಿ**
**ಯೇಽವಿದ್ಯಾಮುಪಾಸತೇ ।**
**ತತೋ ಭೂಯ ಇವ ತೇ ತಮೋ**
**ಯ ಉ ವಿದ್ಯಾಯಾಂ ರತಾಃ ॥ ೯ ॥**

ಯೇ = ಯಾರು ಅವಿದ್ಯಾಂ = ಅವಿದ್ಯೆಯನ್ನು ಉಪಾಸತೇ = ಉಪಾಸನೆ ಮಾಡು ತ್ತಾರೋ (ತೇ = ಅವರು) ಅಂಧಂ ತಮಃ = ಕುರುಡುಗತ್ತಲೆಯನ್ನು ಪ್ರವಿಶಂತಿ = ಪ್ರವೇಶಿಸುತ್ತಾರೆ, ಯೇ ಉ = ಆದರೆ ಯಾರು ವಿದ್ಯಾಯಾಂ = ವಿದ್ಯೆಯಲ್ಲಿ ರತಾಃ = ನಿರತ ರಾಗಿರುವರೋ ತೇ = ಅವರು ತತಃ = ಅದಕ್ಕಿಂತ ಭೂಯಃ ಇವ = ಹೆಚ್ಚಾದ ತಮಃ = ಕತ್ತಲೆಯನ್ನು (ಪ್ರವಿಶಂತಿ = ಪ್ರವೇಶಿಸುತ್ತಾರೆ)

೯. ಯಾರು ಅವಿದ್ಯೆಯನ್ನು[೧] ಉಪಾಸನೆಮಾಡುತ್ತಾರೋ (ಅವರು) ಕುರುಡುಗತ್ತಲೆಯನ್ನು ಪ್ರವೇಶಿಸುತ್ತಾರೆ; ಆದರೆ ಯಾರು ವಿದ್ಯೆಯಲ್ಲಿ[೨] ನಿರತರಾಗಿರುವರೋ ಅವರು ಅದಕ್ಕಿಂತ ಹೆಚ್ಚಿನ[೩] ಕತ್ತಲೆಯನ್ನು (ಪ್ರವೇಶಿಸುತ್ತಾರೆ).

[ನಾಲ್ಕನೆಯ ಮಂತ್ರದಿಂದ ಎಂಟನೆಯ ಮಂತ್ರದ ವರೆಗೆ ಆತ್ಮನ ಸ್ವರೂಪವನ್ನು ಬೋಧಿಸಿದ್ದಾಯಿತು ಇನ್ನು ಮುಂದೆ ಬರುವ ಮಂತ್ರಗಳು ಕರ್ಮೋಪಾಸಕರನ್ನು ಉದ್ದೇಶಿಸಿ ಹೇಳುತ್ತವೆ ಜ್ಞಾನವಿಲ್ಲದೆ ಕರ್ಮೋಪಾಸನೆಗಳನ್ನು ಮಾಡುವವರಿಗಿಂತ ಕರ್ಮವನ್ನು ಬಿಟ್ಟು ದೇವತೆಗಳ ಉಪಾಸನೆಯನ್ನು ಮಾಡುವವರು ಕೆಳಗಿನ ಮಟ್ಟಕ್ಕೆ ಸೇರಿದವರೆಂದು ಈ ಮಂತ್ರವು ತಿಳಿಸುತ್ತದೆ

[೧] ವಿದ್ಯೆಗೆ ವಿರೋಧವಾದ ಅಗ್ನಿಹೋತ್ರಾದಿ-ಕರ್ಮಗಳು. ಇವುಗಳ ಅನುಷ್ಠಾನ ಆತ್ಮ-ಜ್ಞಾನವಿಲ್ಲದಿರುವಾಗ ಮಾತ್ರ ಸಾಧ್ಯವು.

[೨] ಇದು ಬ್ರಹ್ಮವಿದ್ಯೆಯಲ್ಲ; ಕರ್ಮವಿಹೀನವಾದ ದೇವತಾವಿಷಯಕಜ್ಞಾನ.

[೩] "ಭೂಯಃ ಇವ" ಎಂಬುದಕ್ಕೆ "ಭೂಯ ಏವ" ಎಂದು ಆಚಾರ್ಯರು ವ್ಯಾಖ್ಯಾನ ಮಾಡಿದ್ದಾರೆ.]

ಅನ್ಯದೇವಾಹುರ್ವಿದ್ಯಯಾ-
ನ್ಯದಾಹುರವಿದ್ಯಯಾ ।
ಇತಿ ಶುಶ್ರುಮ ಧೀರಾಣಾಂ
ಯೇ ನಸ್ತದ್ವಿಚಚಕ್ಷಿರೇ ॥ ೧೦ ॥

ವಿದ್ಯಯಾ = ವಿದ್ಯೆಯಿಂದ ಅನ್ಯತ್ ಏವ = ಬೇರೆಯೆಂದೇ (ಪೂರ್ವಾಚಾರ್ಯಾಃ = ಪೂರ್ವಾಚಾರ್ಯರು) ಆಹುಃ = ಹೇಳುತ್ತಾರೆ ಅವಿದ್ಯಯಾ = ಅವಿದ್ಯೆಯಿಂದ ಅನ್ಯತ್ = ಬೇರೆಯೆಂದು ಆಹುಃ = ಹೇಳುತ್ತಾರೆ; ಯೇ = ಯಾರು ನಃ = ನಮಗೆ ತತ್ = ಅದನು ವಿಚಚಕ್ಷಿರೇ = ವಿವರಿಸಿದರೋ [ತೇಷಾಂ = ಅಂತಹ] ಧೀರಾಣಾಂ = ಧೀರರಿಂದ ಇತಿ = ಹೀಗೆ ಶುಶ್ರುಮ = ಕೇಳಿದ್ದೇವೆ.

೧೦. 'ವಿದ್ಯೆಯ (ಫಲವು)[೧] ಬೇರೆಯೆಂದೂ, ಅವಿದ್ಯೆಯ (ಫಲವು)[೨] ಬೇರೆಯೆಂದೂ (ಪೂರ್ವಾಚಾರ್ಯರು) ಹೇಳುತ್ತಾರೆ;' ಯಾರು ನಮಗೆ ಅವನ್ನು[೩] ವಿವರಿಸಿದರೋ (ಅಂತಹ) ಧೀರರಿಂದ ಹೀಗೆ ಕೇಳಿರುತ್ತೇವೆ.

[[೧] ದೇವತಾಜ್ಞಾನದಿಂದ ದೇವಲೋಕಕ್ಕೆ ಹೋಗುವುದು: **ವಿದ್ಯಯಾ ದೇವಲೋಕಃ** (ಬೃ. ಉ ೧।೫।೧೬) ಎಂಬ ಶ್ರುತಿ ಇದಕ್ಕೆ ಆಧಾರ

[೨] ಕರ್ಮದಿಂದ ಪಿತೃಲೋಕಕ್ಕೆ ಹೋಗುವುದು **ಕರ್ಮಣಾ ಪಿತೃಲೋಕಃ** (ಬೃ. ಉ. ೧।೫।೧೬) ಎಂಬ ಶ್ರುತಿ ಇದಕ್ಕೆ ಆಧಾರ

[೩] ಕರ್ಮವನ್ನು ಮತ್ತು ಜ್ಞಾನವನ್ನು ]

**ವಿದ್ಯಾಂ ಚಾವಿದ್ಯಾಂ ಚ**
**ಯಸ್ತದ್ವೇದೋಭಯಂ ಸಹ ।**
**ಅವಿದ್ಯಯಾ ಮೃತ್ಯುಂ ತೀರ್ತ್ವಾ**
**ವಿದ್ಯಯಾಮೃತಮಶ್ನುತೇ ॥ ೧೧ ॥**

**ಯಃ** = ಯಾವನು **ವಿದ್ಯಾಂ ಚ** = ವಿದ್ಯೆಯನ್ನೂ **ಅವಿದ್ಯಾಂ ಚ** = ಮತ್ತು ಅವಿದ್ಯೆಯನ್ನೂ **ತತ್ ಉಭಯಂ** = ಆ ಎರಡನ್ನೂ **ಸಹ** = ಒಟ್ಟಿಗೆ **ವೇದ** = ಅರಿಯುತ್ತಾನೆಯೋ (**ಸಃ** = ಅವನು) **ಅವಿದ್ಯಯಾ** = ಅವಿದ್ಯೆಯ ದ್ವಾರಾ **ಮೃತ್ಯುಂ** = ಮೃತ್ಯುವನ್ನು **ತೀರ್ತ್ವಾ** = ದಾಟಿ **ವಿದ್ಯಯಾ** = ವಿದ್ಯೆಯ ದ್ವಾರಾ **ಅಮೃತಂ** = ಅಮೃತವನ್ನು **ಅಶ್ನುತೇ** = ಪಡೆಯುತ್ತಾನೆ.

೧೧. ಯಾವನು ವಿದ್ಯೆ ಮತ್ತು ಅವಿದ್ಯೆ—ಇವೆರಡನ್ನೂ ಒಟ್ಟುಗೂಡಿಸಿ ಅರಿಯುತ್ತಾನೋ (ಅವನು) ಅವಿದ್ಯೆಯ ದ್ವಾರಾ[೧] ಮೃತ್ಯುವನ್ನು[೨] ದಾಟಿ, ವಿದ್ಯೆಯ ದ್ವಾರಾ[೩] ಅಮೃತವನ್ನು[೪] ಪಡೆಯುತ್ತಾನೆ.

[ಆಪೇಕ್ಷಿಕವಾದ ಅಮೃತತ್ವವನ್ನು ಪಡೆಯಲು ಕರ್ಮಜ್ಞಾನಗಳ ಸಮುಚ್ಚಯವು ಸುಲಭಸಾಧನವೆಂದು ಈ ಮಂತ್ರದಲ್ಲಿ ಸೂಚಿಸಿದೆ.

[೧] ಅಗ್ನಿಹೋತ್ರಾದಿಕರ್ಮಗಳ ದ್ವಾರಾ.

[೨] ಮನುಷ್ಯನ ಸ್ವಾಭಾವಿಕ-ಕರ್ಮಜ್ಞಾನಗಳನ್ನೇ ಮೃತ್ಯುವೆಂದು ಹೇಳಿದೆ.

[೩] ದೇವತಾಜ್ಞಾನದ ದ್ವಾರಾ.

[೪] ಆತ್ಯಂತಿಕವಾದ ಮೋಕ್ಷವಲ್ಲ, ಆಪೇಕ್ಷಿಕವಾದ ದೇವತಾತ್ಮಭಾವ.

ವೇದಾಂತದೇಶಿಕರ ವಿಶಿಷ್ಟಾದ್ವೈತಪರ ಭಾಷ್ಯದ ಪ್ರಕಾರ ವಿದ್ಯೆಯು ಪರಮಾತ್ಮೋಪಾಸನ-ರೂಪವಾದ ಜ್ಞಾನವನ್ನೂ ಅವಿದ್ಯೆಯು ಅದಕ್ಕೆ ಅಂಗವಾದ ಕರ್ಮವನ್ನೂ ಸೂಚಿಸುತ್ತವೆ ]

ಅಂಧಂ ತಮಃ ಪ್ರವಿಶಂತಿ
ಯೇಽಸಂಭೂತಿಮುಪಾಸತೇ ।
ತತೋ ಭೂಯ ಇವ ತೇ ತಮೋ
ಯ ಉ ಸಂಭೂತ್ಯಾಂ ರತಾಃ ॥ ೧೨ ॥

**ಯೇ** = ಯಾರು **ಅಸಂಭೂತಿಂ** = ಅಸಂಭೂತಿಯನ್ನು **ಉಪಾಸತೇ** = ಉಪಾಸನೆ ಮಾಡುತ್ತಾರೋ (**ತೇ** = ಅವರು) **ಅಂಧಂ ತಮಃ** = ಕುರುಡುಗತ್ತಲೆಯನ್ನು **ಪ್ರವಿಶಂತಿ** = ಪ್ರವೇಶಿಸುತ್ತಾರೆ, **ಯೇ ಉ** = ಆದರೆ ಯಾರು **ಸಂಭೂತ್ಯಾಂ** = ಸಂಭೂತಿಯಲ್ಲಿ **ರತಾಃ** = ನಿರತರಾಗಿರುವರೋ (**ತೇ** = ಅವರು) **ತತಃ** ಅದಕ್ಕಿಂತ **ಭೂಯಃ ಇವ** = ಹೆಚ್ಚಾದ **ತಮಃ** = ಕತ್ತಲೆಯನ್ನು (**ಪ್ರವಿಶಂತಿ** = ಪ್ರವೇಶಿಸುತ್ತಾರೆ)

**೧೨.** ಯಾರು ಅಸಂಭೂತಿಯನ್ನು[೧] ಉಪಾಸನೆಮಾಡುತ್ತಾರೋ (ಅವರು) ಕುರುಡುಗತ್ತಲೆಯನ್ನು ಪ್ರವೇಶಿಸುತ್ತಾರೆ. ಆದರೆ ಯಾರು ಸಂಭೂತಿಯಲ್ಲಿ[೨] ನಿರತರಾಗಿರುವರೋ ಅವರು ಅದಕ್ಕಿಂತ ಹೆಚ್ಚಿನ ಕತ್ತಲೆಯನ್ನು ಪ್ರವೇಶಿಸುತ್ತಾರೆ.

[ಈಗ ಅವ್ಯಾಕೃತವಾದ ಪ್ರಕೃತಿ, ವ್ಯಾಕೃತವಾದ ಕಾರ್ಯಬ್ರಹ್ಮ—ಇವೆರಡರ ಉಪಾಸನೆಗಳನ್ನೂ ಸೇರಿಸಬೇಕೆಂಬ ಇಚ್ಛೆಯಿಂದ ಶ್ರುತಿಯು ಇವುಗಳನ್ನು ಪ್ರತ್ಯೇಕವಾಗಿ ನಿಂದಿಸಿದೆ.

೧ ಅವ್ಯಾಕೃತವೆಂಬ ಹಸರಿನ ಪ್ರಕೃತಿ, ಕಾರಣ ಅಥವಾ ಅವಿದ್ಯೆ ಅವ್ಯಾಕೃತವೆಂದರೆ ನಾಮರೂಪಗಳು ಪಿಂಗಡವಾಗುವುದಕ್ಕೆ ಮೊದಲೇ ಇದ್ದ ಸೂಕ್ಷ್ಮಾವಸ್ಥೆ. ಇದು ಕಾಮ-ಕರ್ಮಗಳಿಗೆ ಕಾರಣವಾಗಿರುತ್ತದೆ. ಅವ್ಯಾಕೃತದ ಉಪಾಸನೆಯೆಂದರೆ ಜಗತ್ತಿನ ಕಾರಣರೂಪದಲ್ಲಿರುವ ಬ್ರಹ್ಮದ ಉಪಾಸನೆ

೨ ಸೃಷ್ಟಿಯಲ್ಲಿ ಮೊದಲುಸೆಯುವನಾದ ಹಿರಣ್ಯಗರ್ಭನೆಂಬ ಕಾರ್ಯಬ್ರಹ್ಮ. ವ್ಯಾಕೃತೋಪಾಸನಯೆಂದರೆ ಜಗದ್ರೂಪದಲ್ಲಿರುವ ಕಾರ್ಯಬ್ರಹ್ಮನ ಉಪಾಸನೆ]

ಅನ್ಯದೇವಾಹುಃ ಸಂಭವಾ-
ದನ್ಯದಾಹುರಸಂಭವಾತ್ ।
ಇತಿ ಶುಶ್ರುಮ ಧೀರಾಣಾಂ
ಯೇ ನಸ್ತದ್ವಿಚಚಕ್ಷಿರೇ ॥ ೧೩ ॥

**ಸಂಭವಾತ್** = ಸಂಭೂತಿಯಿಂದ **ಅನ್ಯತ್ ಏವ** = ಬೇರೆಯೆಂದೇ **ಆಹುಃ** = ಹೇಳುತ್ತಾರೆ, **ಅಸಂಭವಾತ್** = ಅಸಂಭೂತಿಯಿಂದ **ಅನ್ಯತ್** = ಬೇರೆಯೆಂದು **ಆಹುಃ** = ಹೇಳುತ್ತಾರೆ; **ಯೇ** = ಯಾರು **ನಃ** = ನಮಗೆ **ತತ್** = ಅದನ್ನು **ವಿಚಚಕ್ಷಿರೇ** = ವಿವರಿಸಿದರೋ (**ತೇಷಾಂ** = ಅಂತಹ) **ಧೀರಾಣಾಂ** = ಧೀರರಿಂದ **ಇತಿ** = ಹೀಗೆ **ಶುಶ್ರುಮ** = ಕೇಳಿದ್ದೇವೆ

೧೩. 'ಸಂಭೂತಿಯ[೧] (ಫಲವು)[೨] ಬೇರೆಯೆಂದೂ, ಅಸಂಭೂತಿಯ[೩] (ಫಲವು)[೪] ಬೇರೆಯೆಂದೂ (ಪೂರ್ವಾಚಾರ್ಯರು) ಹೇಳುತ್ತಾರೆ;' ಯಾರು ನಮಗೆ ಅದನ್ನು[೫] ವಿವರಿಸಿದರೋ (ಅಂತಹ) ಧೀರರಿಂದ ಹೀಗೆ ಕೇಳಿರುತ್ತೇವೆ

[ಈಗ ಎರಡು ಉಪಾಸನೆಗಳನ್ನೂ ಸೇರಿಸಿಕೊಂಡು ಅನುಷ್ಠಿಸಬೇಕು ಎಂಬುದಕ್ಕೆ ಕಾರಣ ವಾಗಿ ಒಟ್ಟಾದ ಆ ಎರಡು ಉಪಾಸನೆಗಳ ಫಲಗಳನ್ನು ಈ ಮಂತ್ರವು ತಿಳಿಸುತ್ತದೆ.

[೧] ಕಾರ್ಯಬ್ರಹ್ಮದ ಉಪಾಸನೆಯ

[೨] ಅಣಿಮಾದ್ಯೈಶ್ವರ್ಯರೂಪವಾದ ಫಲ

[೩] ಅವ್ಯಾಕೃತೋಪಾಸನೆಯ

[೪] ಪ್ರಕೃತಿಯಲ್ಲಿ ಲಯವಾಗುವುದು.

[೫] ವ್ಯಾಕೃತ-ಅವ್ಯಾಕೃತ ಉಪಾಸನೆಗಳ ಫಲ]

**ಸಂಭೂತಿಂ ಚ ವಿನಾಶಂ ಚ**
**ಯಸ್ತದ್ವೇದೋಭಯಂ ಸಹ ।**
**ವಿನಾಶೇನ ಮೃತ್ಯುಂ ತೀರ್ತ್ವಾ**
**ಸಂಭೂತ್ಯಾಮೃತಮಶ್ನುತೇ ॥ ೧೪ ॥**

**ಯಃ** = ಯಾವನು (**ಅ**)**ಸಂಭೂತಿಂ ಚ** = ಅಸಂಭೂತಿಯನ್ನೂ **ವಿನಾಶಂ ಚ** = ವಿನಾಶವನ್ನೂ **ತತ್ ಉಭಯಂ** = ಆ ಎರಡನ್ನೂ **ಸಹ** = ಒಟ್ಟಿಗೆ **ವೇದ** = ಅರಿಯುತ್ತಾನೆಯೋ (**ಸಃ** = ಅವನು) **ವಿನಾಶೇನ** = ವಿನಾಶದ ದ್ವಾರಾ **ಮೃತ್ಯುಂ** = ಮೃತ್ಯುವನ್ನು **ತೀರ್ತ್ವಾ** = ದಾಟಿ (**ಅ**)**ಸಂಭೂತ್ಯಾ** = ಅಸಂಭೂತಿಯ ದ್ವಾರಾ **ಅಮೃತಂ** = ಅಮೃತವನ್ನು **ಅಶ್ನುತೇ** = ಪಡೆಯುತ್ತಾನೆ.

೧೪. ಯಾವನು (ಅ)ಸಂಭೂತಿ[೧] ಮತ್ತು ವಿನಾಶ—ಇವೆರಡನ್ನೂ ಒಟ್ಟುಗೂಡಿಸಿ ಅರಿಯುತ್ತಾನೋ (ಅವನು) ವಿನಾಶದ ದ್ವಾರಾ[೨] ಮೃತ್ಯುವನ್ನು[೩] ದಾಟಿ, (ಅ)ಸಂಭೂತಿಯ[೪] ದ್ವಾರಾ ಅಮೃತವನ್ನು[೫] ಪಡೆಯುತ್ತಾನೆ.

[ಹೀಗಿರುವಾಗ ವ್ಯಾಕೃತ, ಅವ್ಯಾಕೃತ—ಇವುಗಳಿಗೆ ಏಕಪುರುಷಾರ್ಥವಾಗಬೇಕಾಗಿರುವುದರಿಂದ ಇವುಗಳನ್ನು ಸೇರಿಸಿಕೊಂಡು ಉಪಾಸಿಸುವುದು ಯುಕ್ತವಾಗಿದೆ ಎಂಬುದನ್ನು ಈ ಮಂತ್ರವು ತಿಳಿಸುತ್ತದೆ.

[೧] ಶ್ರೀಶಂಕರಾಚಾರ್ಯರು 'ಸಂಭೂತಿ' ಎಂಬುದನ್ನು 'ಅಸಂಭೂತಿ' ಎಂದು ಗ್ರಹಿಸಬೇಕೆಂದು ಹೇಳಿರುತ್ತಾರೆ.

[೨] ಹಿರಣ್ಯಗರ್ಭನ ಅಥವಾ ಕಾರ್ಯಬ್ರಹ್ಮನ ಉಪಾಸನೆಯಿಂದ.

[೩] ಅನ್ಯೈಶ್ವರ್ಯ ಅಧರ್ಮ ಕಾಮ ಮೊದಲಾದ ದೋಷಗಳ ಗುಂಪನ್ನು

[೪] ಅವ್ಯಾಕೃತೋಪಾಸನೆಯಿಂದ

[೫] ಪ್ರಕೃತಿಲಯವನ್ನು

ವೇದಾಂತದೇಶಿಕರ ಭಾಷ್ಯದ ಪ್ರಕಾರ 'ಸಂಭೂತಿ' ಎಂದರೆ ಬ್ರಹ್ಮಪ್ರಾಪ್ತಿಯ ಒಂದು ರೂಪ 'ಅಸಂಭೂತಿ' ಎಂಬುದು ಪ್ರತಿಬಂಧಗಳ ನಾಶವನ್ನು ಸೂಚಿಸುತ್ತದೆ]

ಹಿರಣ್ಮಯೇನ ಪಾತ್ರೇಣ
ಸತ್ಯಸ್ಯಾಪಿಹಿತಂ ಮುಖಮ್ ।
ತತ್ತ್ವಂ ಪೂಷನ್ನಪಾವೃಣು
ಸತ್ಯಧರ್ಮಾಯ ದೃಷ್ಟಯೇ ॥ ೧೫ ॥

ಪೂಷನ್ ಹೇ ಪೂಷನ್ ಹಿರಣ್ಮಯೇನ = ಜ್ಯೋತಿರ್ಮಯವಾದ ಪಾತ್ರೇಣ = ಮುಚ್ಚಳದಿಂದ ಸತ್ಯಸ್ಯ = ಸತ್ಯದ ಮುಖಂ = ಮುಖವು ಅಪಿಹಿತಂ = ಮುಚ್ಚಲ್ಪಟ್ಟಿದೆ; ತ್ವಂ = ನೀನು ಸತ್ಯಧರ್ಮಾಯ = ಸತ್ಯಧರ್ಮನಾದ ನನಗೆ ದೃಷ್ಟಯೇ = ಕಾಣುವುದಕ್ಕಾಗಿ ತತ್ = ಅದನ್ನು ಅಪಾವೃಣು = ತೆಗೆದುಹಾಕು

೧೫. ಹೇ ಪೂಷನ್[೧], ಜ್ಯೋತಿರ್ಮಯವಾದ ಮುಚ್ಚಳದಿಂದ[೨] ಸತ್ಯದ ಮುಖವು[೩] ಮುಚ್ಚಲ್ಪಟ್ಟಿದೆ; ಸತ್ಯಧರ್ಮನಾದ[೪] ನನಗೆ (ಸತ್ಯವು) ಕಾಣುವಂತೆ ಅದನ್ನು ನೀನು ತೆಗೆದುಹಾಕು.

[ಏಷಣಗಳನ್ನು ಬಿಡದೆ ಜನ್ಮದಿಂದ ಮರಣದ ವರೆಗೆ ಕರ್ಮಮಾರ್ಗದಲ್ಲಿ ಪ್ರವೃತ್ತನಾಗಿ ಅಪರಬ್ರಹ್ಮವನ್ನು ಉಪಾಸನೆಮಾಡುತ್ತಿರುವ ಸಾಧಕನು ಯಾವ ಮಾರ್ಗದ ಮೂಲಕ ಅಮೃತತ್ವವನ್ನು ಹೊಂದುವನೆಂದು ಶ್ರುತಿಯು ಇಲ್ಲಿಂದ ಹೇಳುತ್ತೆ. ಆದಿತ್ಯಮಂಡಲದ ಪ್ರಕಾಶಮಾನವಾದ ಕಿರಣಗಳು ಅದರಲ್ಲಿರುವ ಸತ್ಯಬ್ರಹ್ಮವನ್ನು ಕಾಣದಂತೆ ಮುಚ್ಚಿಕೊಂಡಿರುತ್ತವೆ. ಮರಣಕಾಲವು ಒದಗಿದಾಗ ಉಪಾಸಕನು ಆತ್ಮಪ್ರಾಪ್ತಿಗೋಸ್ಕರ ಸತ್ಯಾತ್ಮನನ್ನು ಈ ರೀತಿ ಪ್ರಾರ್ಥಿಸುತ್ತಾನೆ * ಆದಿತ್ಯ, ಹೃದಯ, ಕಣ್ಣುಗಳು—ಇವು ಬ್ರಹ್ಮೋಪಾಸನೆಗೆ ವಿಶೇಷ ಸ್ಥಾನಗಳೆಂದು ಶ್ರುತಿಗಳು ಹೇಳುತ್ತವೆ: ಛಾಂದೋಗ್ಯ ೩.೧೯.೪, ೮.೩.೩, ೪.೧೫.೧; ಬೃಹದಾರಣ್ಯಕ ೨.೧.೨, ೪.೩.೬, ೨.೩.೫; ಕೌಷೀತಕೀ ೪.೩. ಕಠ ೬.೯

[೧] ಪೋಷಕನಾದ ಸೂರ್ಯನೆ.

[೨] ಆದಿತ್ಯಮಂಡಲವೇ ಮುಚ್ಚಳ.

[೩] ದ್ವಾರವು

[೪] ಸತ್ಯಬ್ರಹ್ಮವನ್ನು ಉಪಾಸನೆಮಾಡುವ ಧರ್ಮವುಳ್ಳವನು ಸತ್ಯಧರ್ಮನು ಅಥವಾ ಸತ್ಯವಾದ ಧರ್ಮವನ್ನು ಅನುಷ್ಠಾನಮಾಡುವವನು ಸತ್ಯಧರ್ಮನು.]

ಪೂಷನ್ನೇಕರ್ಷೇ ಯಮ ಸೂರ್ಯ ಪ್ರಾಜಾಪತ್ಯ
ವ್ಯೂಹ ರಶ್ಮೀನ್ ಸಮೂಹ ತೇಜೋ ।
ಯತ್ತೇ ರೂಪಂ ಕಲ್ಯಾಣತಮಂ ತತ್ತೇ
ಪಶ್ಯಾಮಿ ಯೋಽಸಾವಸೌ ಪುರುಷಃ ಸೋಽಹಮಸ್ಮಿ ॥ ೧೬ ॥

ಪೂಷನ್ = ಹೇ ಪೂಷನ್ ಏಕರ್ಷೇ = ಏಕಾಕಿಯಾಗಿ ಸಂಚರಿಸುವವನೆ ಯಮ = ಯಮನ ಪ್ರಾಜಾಪತ್ಯ = ಪ್ರಾಜಾಪತ್ಯನೆ ಸೂರ್ಯ = ಸೂರ್ಯನೆ ರಶ್ಮೀನ್ = ರಶ್ಮಿಗಳನ್ನು ವ್ಯೂಹ = ತೆಗೆ, ತೇಜಃ ತೇಜಸ್ಸನ್ನು ಸಮೂಹ = ಹಿಂತೆಗೆದುಕೊ, ತೇ = ನಿನ್ನ ಕಲ್ಯಾಣತಮಂ = ಕಲ್ಯಾಣತಮವಾದ ರೂಪಂ = ರೂಪವು ಯತ್ = ಯಾವುದೋ ತತ್ = ಅದನ್ನು ತೇ = ನಿನ್ನ (ಪ್ರಸಾದಾತ್ = ಅನುಗ್ರಹದಿಂದ) ಪಶ್ಯಾಮಿ = ನೋಡುತ್ತೇನೆ, ಅಸೌ = ಆ ಅಸೌ = ಆ ಪುರುಷಃ = ಪುರುಷನು ಯಃ = ಯಾವನೋ ಸಃ = ಅವನೇ ಅಹಂ ಅಸ್ಮಿ = ನಾನಾಗಿರುವೆನು.

೧೬. ಹೇ ಪೂಷನ್,[1] ಏಕಾಕಿಯಾಗಿ ಸಂಚರಿಸುವವನೆ, ಯಮನೆ,[2] ಸೂರ್ಯನೆ,[3] ಪ್ರಾಜಾಪತ್ಯನೆ,[4] (ನಿನ್ನ) ರಶ್ಮಿಗಳನ್ನು ತೆಗೆ, (ನಿನ್ನ) ತೇಜಸ್ಸನ್ನು ಹಿಂತೆಗೆದುಕೊ; ನಿನ್ನ ಕಲ್ಯಾಣತಮವಾದ[5] ರೂಪವು ಯಾವುದೋ ಅದನ್ನು (ನಿನ್ನ) ಅನುಗ್ರಹದಿಂದ ನೋಡುತ್ತೇನೆ. ಆ[6] ಆ[7] ಪುರುಷನು[8] ಯಾವನೋ ಅವನೇ ನಾನಾಗಿದ್ದೇನೆ.

[[1] ಜಗತ್ತನ್ನು ಪೋಷಿಸುವುದರಿಂದ ಸೂರ್ಯನಿಗೆ ಪೂಷಾ ಎಂದು ಹೆಸರು.
[2] ಎಲ್ಲವನ್ನೂ ಹತೋಟಿಯಲ್ಲಿಟ್ಟಿರುವುದರಿಂದ (ಸಂಯಮನಾತ್) ಯಮನು.
[3] ರಶ್ಮಿಗಳನ್ನೂ ಪ್ರಾಣಗಳನ್ನೂ ರಸಗಳನ್ನೂ ಸ್ವೀಕರಿಸುವುದರಿಂದ ಸೂರ್ಯನು
[4] ಪ್ರಜಾಪತಿಯ ಮಗನಾದುದರಿಂದ ಪ್ರಾಜಾಪತ್ಯನು.
[5] ಅತ್ಯಂತ ಶೋಭನವಾದ.
[6] ಆದಿತ್ಯಮಂಡಲದಲ್ಲಿರುವ.
[7] ವ್ಯಾಹೃತಿಗಳೆಂಬ (ಭೂಃ, ಭುವಃ, ಸ್ವಃ) ಅವಯವಗಳುಳ್ಳ.
[8] ಪುರುಷಾಕಾರದಲ್ಲಿರುವುದರಿಂದ ಅಥವಾ ಈತನು ಪ್ರಾಣಬುದ್ಧಿಗಳ ರೂಪದಿಂದ ಜಗತ್ತನ್ನೆಲ್ಲಾ ಪೂರ್ಣಗೊಳಿಸಿರುವುದರಿಂದ ಅಥವಾ ಪುರದಲ್ಲಿ (ಹೃದಯದಲ್ಲಿ) ಇರುವುದರಿಂದ ಪುರುಷನು ]

ವಾಯುರನಿಲಮಮೃತ-
ಮಥೇದಂ ಭಸ್ಮಾಂತಂ ಶರೀರಮ್ ।
ಓಂ ಕೃತೋ ಸ್ಮರ ಕೃತಂ ಸ್ಮರ
ಕೃತೋ ಸ್ಮರ ಕೃತಂ ಸ್ಮರ ॥ ೧೭ ॥

**ಅಥ** =ಈಗ **ವಾಯುಃ** = ಪ್ರಾಣವಾಯುವು **ಅಮೃತಂ** = ಸಾವಿಲ್ಲದ **ಅನಿಲಂ** = ಅನಿಲವನ್ನು (**ಪ್ರತಿಪದ್ಯತಾಂ** = ಸೇರಲಿ), **ಇದಂ** = ಈ **ಶರೀರಂ** = ಶರೀರವು **ಭಸ್ಮಾಂತಂ** (**ಭೂಯಾತ್**) = ಭಸ್ಮವಾಗಲಿ **ಓಂ** = ಓಂ **ಕ್ರತೋ** = ಕ್ರತುವೆ **ಸ್ಮರ** = ಸ್ಮರಿಸು, **ಕೃತಂ** = ಮಾಡಿದ್ದನ್ನು **ಸ್ಮರ** = ಸ್ಮರಿಸು **ಕ್ರತೋ ಸ್ಮರ ಕೃತಂ ಸ್ಮರ** (ಪುನರ್ವಚನ ಆದರಕ್ಕೋಸ್ಕರ).

೧೭. ಈಗ (ನನ್ನ) ಪ್ರಾಣವಾಯುವು ಸಾವಿಲ್ಲದ ಅನಿಲವನ್ನು[೧] (ಸೇರಲಿ); ಈ ದೇಹವು ಬೂದಿಯಾಗಲಿ. ಓಂ ಕ್ರತುವೆ,[೨] ಸ್ಮರಿಸು, ಮಾಡಿರುವುದನ್ನು[೩] ಸ್ಮರಿಸು. ಓಂ ಕ್ರತುವೆ,[೪] ಸ್ಮರಿಸು, ಮಾಡಿರುವುದನ್ನು ಸ್ಮರಿಸು.[೫]

[[೧] ಸರ್ವಾತ್ಮನಾದ ಸೂತ್ರಾತ್ಮ; ಇವನನ್ನೇ ಮಾತರಿಶ್ವನೆಂದು ನಾಲ್ಕನೆಯ ಮಂತ್ರದಲ್ಲಿ ಹೇಳಿದೆ

[೨] ಸಂಕಲ್ಪರೂಪನಾದ ಅಗ್ನಿ

[೩] ಬಾಲ್ಯದಿಂದ ಅನುಷ್ಠಾನಮಾಡಿದ ಕರ್ಮ.

[೪] ಸಂಕಲ್ಪಸ್ವರೂಪನಾದ ಅಗ್ನಿ (ಎಂದರೆ ಬ್ರಹ್ಮ), ಓಂಕಾರವು ಇವನ ಪ್ರತೀಕ.

[೫] ಅಂತಿಮಕಾಲದಲ್ಲಿ ಉಂಟಾಗುವ ಸ್ಮೃತಿಯು ಜೀವಾತ್ಮನ ಭವಿಷ್ಯವನ್ನು ನಿರ್ಧರಿಸುವುದರಿಂದ ಅವಸಾನಕಾಲ ಒದಗಿದಾಗ ಮನಸ್ಸು ಸದ್ಭಾವನೆಗಳ ಕಡೆಗೇ ಹೋಗುವಂತೆ ಪ್ರಯತ್ನಿಸಬೇಕು 'ಮರಣಕಾಲದಲ್ಲಿ ಯಾವ ಯಾವ ಭಾವವನ್ನಾದರೂ ಸ್ಮರಿಸುತ್ತಾ ದೇಹವನ್ನು ಬಿಡುವನೋ, ಅವನು ಆ ಭಾವವನ್ನೇ ಹೊಂದುವನು'[೨] ಎಂದು ಭಗವಂತನು ಗೀತೆಯಲ್ಲಿ (೮–೬) ಹೇಳಿದ್ದಾನೆ]

> **ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್**
> **ವಿಶ್ವಾನಿ ದೇವ ವಯುನಾನಿ ವಿದ್ವಾನ್ ।**
> **ಯುಯೋಧ್ಯಸ್ಮಜ್ಜುಹುರಾಣಮೇನೋ**
> **ಭೂಯಿಷ್ಠಾಂ ತೇ ನಮಉಕ್ತಿಂ ವಿಧೇಮ ॥ ೧೮ ॥**

**ಅಗ್ನೇ** = ಹೇ ಅಗ್ನಿ **ಅಸ್ಮಾನ್** = ನಮ್ಮನ್ನು **ರಾಯೇ** = ಕರ್ಮಫಲಭೋಗಕ್ಕಾಗಿ **ಸುಪಥಾ** = ಒಳ್ಳೆಯ ಮಾರ್ಗದಿಂದ **ನಯ** = ಕರೆದುಕೊಂಡುಹೋಗು; **ದೇವ** = ಹೇ ದೇವನೆ **ವಿಶ್ವಾನಿ** = ಎಲ್ಲ **ವಯುನಾನಿ** = ಕರ್ಮಗಳನ್ನು **ವಿದ್ವಾನ್** = ತಿಳಿದಿರುವವನು **ಅಸ್ಮತ್** = ನಮ್ಮಿಂದ **ಜುಹುರಾಣಂ** = ಕುಟಿಲವಾದ **ಏನಃ** = ಪಾಪವನ್ನು **ಯುಯೋಧಿ** = ಬಿಡಿಸು. **ತೇ** = ನಿನಗೆ **ಭೂಯಿಷ್ಠಾಂ** = ಅನೇಕ **ನಮಉಕ್ತಿಂ** = ನಮಸ್ಕಾರವಚನವನ್ನು **ವಿಧೇಮ** = ಹೇಳುತ್ತೇವೆ.

೧೮. ಹೇ ಅಗ್ನಿ, ಕರ್ಮಫಲದ ಭೋಗಕ್ಕಾಗಿ ನಮ್ಮನ್ನು ಒಳ್ಳೆಯ ಮಾರ್ಗದಲ್ಲಿ[೧] ಕರೆದುಕೊಂಡು ಹೋಗು; ಹೇ ದೇವ, (ನೀನು) ಎಲ್ಲ ಕರ್ಮ

ಗಳನ್ನು (ಅಥವಾ ಜ್ಞಾನಗಳನ್ನು) ತಿಳಿದಿರುವವನು. ನಮ್ಮ ಕುಟಿಲವಾದ ಪಾಪವನ್ನು ನಾಶಮಾಡು. ನಿನಗೆ ಪುನಃ ಪುನಃ ನಮಸ್ಕಾರವಚನಗಳನ್ನು[೨] ಹೇಳುತ್ತೇವೆ.

[ಪುನಃ ಇನ್ನೊಂದು ಮಂತ್ರದಿಂದ ಉಪಾಸಕನು ಮಾರ್ಗವನ್ನು ಯಾಚಿಸುತ್ತಾನೆ

[೧] ದಕ್ಷಿಣಮಾರ್ಗದಲ್ಲಿ (ಪಿತೃಯಾಣದಲ್ಲಿ) ಹೋದವರು ಸಂಸಾರಕ್ಕೆ ಪುನಃ ಪುನಃ ಹಿಂದಿರುಗಬೇಕಾಗುತ್ತೆ. ದೇವಯಾನದಲ್ಲಿ ಅಥವಾ ಉತ್ತರಮಾರ್ಗದಲ್ಲಿ ಹೋದವರು ಕಲ್ಪದ ಕೊನೆಯ ವರೆಗೆ ಬ್ರಹ್ಮಲೋಕದಲ್ಲೇ ಇದ್ದು ಅನಂತರ ಕ್ರಮೇಣ ಮುಕ್ತಿಯನ್ನು ಹೊಂದುತ್ತಾರೆ. ದಕ್ಷಿಣಮಾರ್ಗದಲ್ಲಿ ಎಷ್ಟೋ ಸಲ ಹೋಗಿಬಂದು ನೊಂದ ಉಪಾಸಕನು ದೇವಯಾನದಲ್ಲಿ ಹೋಗುವುದಕ್ಕೆ ಅಗ್ನಿಯನ್ನು ಪ್ರಾರ್ಥಿಸುತ್ತಾನೆ.

[೨] ಸಾಯುತ್ತಿರುವ ಉಪಾಸಕನಿಗೆ ವಿಶೇಷವಾಗಿ ಸೇವೆಮಾಡಲು ಶಕ್ತಿಯಿಲ್ಲ, ಆದುದರಿಂದ ನಮಸ್ಕಾರದಿಂದಲೇ ಸೇವೆಯನ್ನು ಸಲ್ಲಿಸುತ್ತಾನೆ ]

# ಪ್ರಸ್ಥಾನತ್ರಯ

(ಮೂಲ ಪ್ರತಿಪದಾರ್ಥ ತಾತ್ಪರ್ಯ ಟಿಪ್ಪಣಿಗಳೊಡನೆ)

| | | | |
|---|---|---|---|
| I | ೧. | ಈಶಾವಾಸ್ಯೋಪನಿಷತ್ | ೦.೫೦ |
| | ೨. | ಕೇನೋಪನಿಷತ್ | ೦.೫೦ |
| | ೩. | ಕಠೋಪನಿಷತ್ | ೧.೫೦ |
| | ೪. | ಪ್ರಶ್ನೋಪನಿಷತ್ | ೧.೦೦ |
| | ೫. | ಮುಂಡಕೋಪನಿಷತ್ | ೧.೦೦ |
| | ೬. | ಮಾಂಡೂಕ್ಯೋಪನಿಷತ್ | ೧.೫೦ |
| | ೭. | ತೈತ್ತಿರೀಯೋಪನಿಷತ್ | ೧.೫೦ |
| | ೮. | ಐತರೇಯೋಪನಿಷತ್ | ೦.೫೦ |
| | ೯. | ಶ್ವೇತಾಶ್ವತರೋಪನಿಷತ್ | ೧.೦೦ |
| | ೧೦. | ಬೃಹದಾರಣ್ಯಕೋಪನಿಷತ್ | ೬.೦೦ |
| | ೧೧. | ಛಾಂದೋಗ್ಯೋಪನಿಷತ್ | ೬.೦೦ |
| II | | ಶ್ರೀಮದ್ಭಗವದ್ಗೀತಾ | ೫.೦೦ |
| III | | ಬ್ರಹ್ಮಸೂತ್ರಗಳು (ಭಾಷ್ಯತ್ರಯದ ಸಂಗ್ರಹದೊಂದಿಗೆ) | ೧೬.೦೦ |

## ಶ್ರೀರಾಮಕೃಷ್ಣಾಶ್ರಮ

ಮೈಸೂರು–೨

ಬೆಲೆ ೦.೫೦